# ಬೇಡ ಮಹಿಳೆಯರ ಆರ್ಥಿಕತೆ

(ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲೂಕಿನ ಕಮಲಾಪುರವನ್ನು ಅನುಲಕ್ಷಿಸಿ)

(ಅರ್ಥಶಾಸ್ತ್ರ ವಿಷಯಕ್ಕೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ನಿಬಂಧ)


ಸಂಶೋಧಕರು

ಸಣ್ಣ ವೀರೇಶ ಪಿ.

ಮಾರ್ಗದರ್ಶಕರು

ಡಾ. ಗಂಗಾಧರ ದೈವಜ್ಞ

ಪ್ರಾಧ್ಯಾಪಕರು





ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೬



1303.A

1303 A

# ಬೇಡ ಮಹಿಳೆಯರ ಆರ್ಥಿಕತೆ

**(ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲೂಕಿನ ಕಮಲಾಪುರವನ್ನು ಅನುಲಕ್ಷಿಸಿ)**

(ಅರ್ಥಶಾಸ್ತ್ರ ವಿಷಯಕ್ಕೆ ಸಂಬಂಧಿಸಿದಂತೆ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ನಿಬಂಧ)

ಸಿರಿಗನ್ನಡ ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ.ಹಂಪಿ.

ಸಂಶೋಧಕರು
**ಸಣ್ಣ ವೀರೇಶ ಪಿ.**
(ರಿ.ನಂ : ೧೫೦೧೧೨೦೩೦೦೨೭)

ಮಾರ್ಗದರ್ಶಕರು
**ಡಾ. ಗಂಗಾಧರ ದೈವಜ್ಞ**
ಪ್ರಾಧ್ಯಾಪಕರು



ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

೨೦೧೬

# ಸಂಶೋಧಕರ ಪ್ರಮಾಣ ಪತ್ರ

**ಬೇಡ ಮಹಿಳೆಯರ ಆರ್ಥಿಕತೆ (ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲೂಕಿನ ಕಮಲಾಪುರವನ್ನು ಅನುಲಕ್ಷಿಸಿ)** ಎಂಬ ನಿಬಂಧವನ್ನು **ಡಾ.ಗಂಗಾಧರ ದೈವಜ್ಞ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Veeresh P.

**ಸಣ್ಣ ವೀರೇಶ ಪಿ.**
ಸಂಶೋಧಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ,ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ : 30/7/2016

# ಮಾರ್ಗದರ್ಶಕರ ಪ್ರಮಾಣ ಪತ್ರ

**ಬೇಡ ಮಹಿಳೆಯರ ಆರ್ಥಿಕತೆ (ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲೂಕಿನ ಕಮಲಾಪುರವನ್ನು ಅನುಲಕ್ಷಿಸಿ)** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ **ಸಣ್ಣ ವೀರೇಶ ಪಿ.** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ.ಗಂಗಾಧರ ದೈವಜ್ಞ**
ಪ್ರಾಧ್ಯಾಪಕರು
ಬುಡಕಟ್ಟು ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬

ದಿನಾಂಕ:
ಸ್ಥಳ: ವಿದ್ಯಾರಣ್ಯ

## ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನ ಉದ್ದೇಶ, ವ್ಯಾಪ್ತಿ, ಮಹತ್ವ ಮತ್ತು ವಿಧಾನ

**ಪ್ರಸ್ತಾವನೆ**

ಮಾನವನ ಜೀವನ ಯಾವಾಗ ಪ್ರಾರಂಭವಾಯಿತೋ ಅದರ ಜೊತೆಗೆ ಸಂಸ್ಕೃತಿಯ ಪರಂಪರೆಯ ಪ್ರಾರಂಭವು ನಡೆಯುತ್ತಾ ಬಂದಿದೆ ಮನುಷ್ಯ ಎಂದು ಗುಂಪು ಗುಂಪಾಗಿ ಜೀವನ ಕ್ರಮವನ್ನು ಕಂಡುಕೊಂಡನೋ ಅಂದಿನಿಂದಲೇ ಹಂತ-ಹಂತವಾಗಿ ನಾಗರಿಕತೆಯನ್ನು ಮೈಗೂಡಿಸಿಕೊಳ್ಳಲು ಪ್ರಯತ್ನಿಸುತ್ತಾ ಬಂದಿದ್ದಾನೆ. ಕೃಷಿ ಪ್ರಾರಂಭದ ನಂತರ ನಾಗರಿಕತೆ ಪ್ರಾರಂಭವಾಯಿತು ಎಂದು ಹೇಳಬಹುದು. ಕಾಲದಿಂದ ಕಾಲಕ್ಕೆ, ವರ್ಗದಿಂದ ವರ್ಗಕ್ಕೆ, ಧರ್ಮದಿಂದ ಧರ್ಮಕ್ಕೆ ವ್ಯತ್ಯಾಸವಿರುವ ಮತ್ತು ಭಿನ್ನವಾಗಿರುವ ಮಹಿಳೆಯರ ಕುರಿತು ಅವರ ಸ್ಥಿತಿಗತಿಗಳನ್ನು ಗಮನದಲ್ಲಿಟ್ಟುಕೊಂಡು "ಬೇಡ ಮಹಿಳೆಯರ ಆರ್ಥಿಕತೆ" ಎಂಬ ವಿಷಯದಲ್ಲಿ ಸೂಕ್ಷ್ಮ ಅಧ್ಯಯನ ಮಾಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಕಮಲಾಪುರದ ಬೇಡ ಮಹಿಳೆಯರ ಆರ್ಥಿಕ ಸ್ಥಿತಿಗತಿಗಳನ್ನು ತಿಳಿಯುವುದರ ಜೊತೆಗೆ ಅವರು ಕಟ್ಟಿಕೊಂಡು ಬಂದಿರುವ ಬದುಕನ್ನು ನೋಡುವುದು ಅವಶ್ಯಕವಾಗಿದೆ. ವೇದಗಳ ಕಾಲದಲ್ಲಿ ಮಹಿಳೆಯರನ್ನು ದೈವಿ ಸೃಷ್ಟಿಯಲ್ಲಿ ನೋಡುತ್ತಿದ್ದರು. ಅದಕ್ಕೆ ಒಂದು ಉದಾಹರಣೆಯನ್ನು ಪರಿಗಣಿಸುವುದಾದರೆ 'ಗಾರ್ಗಿ ಮತ್ತು ಮೈತ್ರಿಯರಿಗೆ ವೇದಗಳ ಕಾಲದಲ್ಲಿ ಮುಕ್ತವಾದಂತಹ ಸ್ವತಂತ್ರವಿರುವುದನ್ನು ನಾವು ವೇದ ಉಪನಿಷತ್ತುಗಳ ಕಾಲದಲ್ಲಿ ನೋಡಬಹುದಾಗಿದೆ. ಅದರ ಜೊತೆಗೆ ಒಂದು ಅಸಂಗತ ಪವಾಡ ಎಂದು ನಂಬಿ ವಿಶೇಷ ಸ್ಥಾನ ನೀಡಿ ದೈವಿ ಸ್ವರೂಪದ ಪೂಜ್ಯ ಭಾವನೆಯಿಂದ ಅವಳನ್ನು ಕಾಣಲಾಗುತ್ತಿತ್ತು ಮತ್ತು ಮಹಿಳೆಯರನ್ನು ಗಮನದಲ್ಲಿಟ್ಟುಕೊಂಡು ಹಲವಾರು ಕಥನ ಕಾವ್ಯಗಳನ್ನು ಸಹ ಸೃಷ್ಟಿಮಾಡಲಾಯಿತು. ಮಹಿಳೆ ಮನೆಯ ಒಡತಿಯಾಗಿ, ಆಸ್ತಿಯ

ಮಾಲೀಕಳಾಗಿ ಇಡೀ ಕುಟುಂಬದ ವ್ಯವಹಾರ ನಿಯಂತ್ರಿಸುವ ಶಕ್ತಿಯನ್ನು ಮಹಿಳೆ ಹೊಂದಿದ್ದರಿಂದ ಅಂದು ಮಾತೃ ಪ್ರಧಾನ ವ್ಯವಸ್ಥೇ ತುಂಬಾ ಬಲಶಾಲಿಯಾಗಿತ್ತು ಎಂದು ತಿಳಿದುಬರುತ್ತದೆ'.

"ಒಂದು ಕಾಲದಲ್ಲಿ ಮಹಿಳೆಯರು ಬಲೆ ಬೀಸಿ ಬೇಟೆಯಾಡುವ, ಗುಂಪು ಕ್ರಿಯೆಯಲ್ಲಿ ಪುರುಷನ ಜೊತೆ ಸೇರಿ ದುಡಿಯುತ್ತಿದ್ದುದು, ಕೆಲವೂಮ್ಮೆ ಅವಳೇ ತಾನೇ ಬೇಟೆಯಾಡಿದ ಮಾಹಿತಿ ದೊರೆಯುತ್ತದೆ. ಅದಕ್ಕೆ ನಿದರ್ಶನವಾಗಿ ಹಲವಾರು ಮಾಸ್ತಿಗಲ್ಲುಗಳ ಮೇಲೆ ಮಹಿಳೆಯ ಬೇಟೆ ಒರಟಿರುವ ಚಿತ್ರಗಳು ಗೋಚರಿಸುತ್ತವೆ.

ಆದಿಮಾನವರು ಬೇಟೆ ಮತ್ತು ಪಶುಪಾಲನೆಯನ್ನು ಅನುಸರಿಸಿ ಆಹಾರ ಪೂರೈಸಿಕೊಳ್ಳುತ್ತಿದ್ದ ಸಂದರ್ಭದಲ್ಲಿ ಕುಟುಂಬದ ಸಂಪೂರ್ಣ ಜವಾಬ್ದಾರಿ ಹೊತ್ತು ಬಿಡುವಿನ ವೇಳೆಯಲ್ಲಿ ಮರದಿಂದ ಬಿದ್ದ ಬೀಜವು ಮೊಳಕೆಯೊಡೆಯವುದನ್ನು ಕಂಡು ಹಿಡಿದು ಮುಂದೆ ಕೃಷಿಯನ್ನು ಕಂಡು ಹಿಡಿಯುವಲ್ಲಿ ಯಶಸ್ವಿಯಾದರು. ಮೊದಲಿಗಳಾಗಿ ಜೊತೆಗೆ ಅವಳನ್ನು ಆಹಾರೋತ್ಪಾದನೆಯ ಆನ್ವೇಷಕಿಯಾಗಿ ಪರಿಗಣಿಸಲಾಗಿದೆ."[೧]

ಮಹಿಳೆಯು ಆರ್ಥಿಕಾಭಿವೃದ್ದಿಗೆ ಮಹತ್ವವಾದ ಕೊಡುಗೆ ನೀಡಿದ್ದಾಳೆ. ಅದರೆ ಮಹಿಳೆಯನ್ನು ಒಂದು ಆರ್ಥಿಕ ಅಭಿವೃದ್ಧಿಯನ್ನು ಪರಿಗಣಸದೇ ಅದನ್ನು ಕೇವಲ ಸೇವೆ ಎಂದೂ ತಿಳಿಸಲಾಗಿದೆ. ಅದು ಕೂಡ ಆರ್ಥಿಕ ಅಭಿವೃದ್ಧಿಯನ್ನು ಕಾಣಲು ನೆರವಾಗಿದೆ ಎಂದೂ ಇಂದಿನವರೆಗೆ ಯಾವುದೇ ಸಿದ್ಧಾಂತ ತತ್ವಗಳು ಪ್ರಸ್ತಾಪ ಮಾಡದಿರುವುದು ವಿಷಾದನೀಯ ಸಂಗತಿಯಾಗಿದೆ. ಆರ್ಥಿಕ ಅಭಿವೃದ್ಧಿಯಲ್ಲಿ ಮನೆಯ ಕೆಲಸದವಳಾಗಿ, ಕೃಷಿಯಲ್ಲಿ ಗಂಡನಿಗೆ ಸಮನಾಗಿ ಕೆಲಸ ನಿರ್ವಹಿಸುವುದು, ಬಿತ್ತುವುದು, ತೆನೆ ಮುರಿಯುವುದು, ತೆನೆ ಕೊಯ್ಯುವುದು ಹೀಗೆ ಕೃಷಿಗೆ ಸಂಬಂಧಪಟ್ಟ ಎಲ್ಲಾ ಕೆಲಸಗಳಲ್ಲೂ ಮಹಿಳೆ ಪುರುಷನ ಸಮನಾಗಿ ಕೆಲಸ ಮಾಡುತ್ತಾಳೆ. ಅದರೆ ಆರ್ಥಿಕಾಭಿವೃದ್ಧಿಯಲ್ಲಿ ಇದನ್ನು ಪರಿಗಣಿಸದೆ ಅಭಿವೃದ್ಧಿ ಎಂದರೆ ಕೇವಲ ಶಿಕ್ಷಣ. ಆರೋಗ್ಯ. ಮೂಲಭೂತ ಸೌಕರ್ಯಗಳ ಇದ್ದರೆ ಮಾತ್ರ ಅದು ಅಭಿವೃದ್ಧಿ ಎಂದು ಹಲವಾರು ತತ್ವಗಳು ಮತ್ತು ಸಿದ್ಧಾಂತಗಳಲ್ಲಿ ಪ್ರಸ್ತಾಪಿರುವುದು ಅಷ್ಟು ಸಮಂಜಸವಾದುದಲ್ಲ.

ಮಹಿಳೆಯು ತನ್ನ ಬಾಲ್ಯವ್ಯವಸ್ಥೆಯಿಂದ ಕೊನೆಯವರೆಗೂ ನಿರಂತರವಾದ ಕಾರ್ಯ ಚಟುವಟಿಕೆಗಳನ್ನು ಮಾಡುತ್ತ ಬಂದಿದ್ದಾಳೆ. ಬಾಲ್ಯವ್ಯಸ್ಥೆಯಲ್ಲಿ ತಂದೆ ತಾಯಿಗಳಿಗೆ ನೆರವಾಗಿ ಯೌವ್ವನಾವ್ಯವಸ್ಥೆಯಲ್ಲಿ ಗಂಡನಿಗೆ, ಅತ್ತೆ–ಮಾವಂದಿರ ಕಷ್ಟ ಸುಖದಲ್ಲಿ ಬಾಗಿಯಾಗಿ ವೃಧ್ಧಾಪ್ಯದಲ್ಲಿ ಮಕ್ಕಳಿಗೆ ಮಾರ್ಗದರ್ಶಕಳಾಗಿ ಇಡೀ ಜೀವನದುದ್ದುಕ್ಕು ಮಹಿಳೆಯ ಪಾತ್ರ ಗುರುತರವಾದದ್ದು.

ಪ್ರತಿಯೊಂದು ಬುಡಕಟ್ಟು ಸಮುದಾಯ ತನ್ನದೇ ಆದಂತಹ ಪ್ರತ್ಯೇಕವಾದ ಭಾಷೆ, ಉಪಭಾಷೆ, ಕುಟುಂಬ ವ್ಯವಸ್ಥೆ, ಆಚರಣೆ, ಸಂಪ್ರದಾಯಗಳನ್ನು ಮೊದಲಿನಿಂದಲೂ ರೂಢಿಸಿಕೊಂಡು ಬಂದಿದೆ. ಅದರಲ್ಲಿ ಬೇಡ ಸಮುದಾಯದವರು ಧಾರ್ಮಿಕ ಮತ್ತು ಮೂಢನಂಬಿಕೆಗಳಲ್ಲಿ ಅಪಾರವಾದ ನಂಬಿಕೆಯಿಟ್ಟಂತಹ ಸಮುದಾಯವಾಗಿದೆ. ಇದಕ್ಕೆ ಮೂಲ ಕಾರಣ ಅನಕ್ಷರತೆ ಮತ್ತು ಮೂಢನಂಬಿಕೆಯ ಜೊತೆಗೆ ಈ ಸಮುದಾಯದ ಮೂಲ ವೃತ್ತಿ ಒಂದು ಕಾಲದಲ್ಲಿ ಬೇಟೆಗಾರಿಕೆಯಾಗಿತ್ತು. ನಂತರ ಪಶುಪಾಲನೆ ವೃತ್ತಿಯನ್ನು ಅನುಸರಿಸಿಕೊಂಡು ಬಂದವರು. ಇವರು ಹೆಚ್ಚಾಗಿ ತೆಲುಗು ಭಾಷೆ ಮಾತನಾಡುವುದು ಕಂಡುಬರುತ್ತದೆ. ಬೇಡ ಸಮುದಾಯದ ಮಹಿಳೆಯರು ಇಂದು ಆರ್ಥಿಕವಾಗಿ ಸಮಾಜದಲ್ಲಿ ಹೇಗೆ ಗುರುತಿಸಿಕೊಳ್ಳುತ್ತಿದ್ದಾರೆ. ಕೃಷಿ, ಕೃಷಿಯೇತರ ಚಟುವಟಿಕೆ, ಸರಕಾರಿ, ಅರೆ ಸರಕಾರಿ, ಖಾಸಗಿ, ವ್ಯಾಪಾರ ಮುಂತಾದ ಕ್ಷೇತ್ರಗಳಲ್ಲಿ ಹೇಗೆ ತಮ್ಮನ್ನು ತೊಡಗಿಸಿಕೊಂಡು ಕುಟುಂಬ ನಿರ್ವಹಣೆ ಮಾಡುತ್ತಿದ್ದಾರೆ ಎಂಬುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳುವ ಪ್ರಯತ್ನ ಮಾಡಲಾಗುವುದು.

### ೧.೧. ಅಧ್ಯಯನದ ಉದ್ದೇಶ

೧. ಬೇಡ ಮಹಿಳೆಯರ ಆರ್ಥಿಕ ಚಟುವಟಿಕೆಯ ಮೂಲಗಳಾದ ಕೃಷಿ, ಕೃಷಿಯೇತರ ಕೂಲಿಗಳ ದುಡಿಮೆಯ ಸ್ವರೂಪವನ್ನು ಅಧ್ಯಯನಿಸುವುದು.

೨. ಪ್ರಸ್ತುತ ಸಂದರ್ಭದಲ್ಲಿ ಬೇಡ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳನ್ನು ಗುರುತಿಸುವುದು.

೩. ಕೆಲ ಮಹಿಳೆಯರು ದೈವಿ ಸಂಬಂಧಿ ಆಚರಣೆಗಳ ಮೂಲಕ ಅವರು ತಮ್ಮ ಆರ್ಥಿಕ ಸ್ಥಿತಿಯನ್ನು ಹೇಗೆ ಸರಿದೂಗಿಸಿಕೊಳ್ಳಲಾಗುತ್ತದೆ ಎಂಬುದನ್ನು ತಿಳಿಯುವುದು.

೪. ಸರಕಾರದ ಯೋಜನೆಗಳು ಬೇಡ ಮಹಿಳೆಯರಿಗೆ ಪ್ರಯೋಜನೆಗಳಾಗಿವೆಯೇ? ಎಂಬುದನ್ನು ಪರೀಶೀಲಿಸುವುದು.

೫. ಆರ್ಥಿಕ, ಶೈಕ್ಷಣಿಕ, ರಾಜಕೀಯ ಸ್ಥಿತಿಗತಿಯನ್ನು ಪರಿಶೀಲಿಸುವುದು.

### ೧.೨. ಅಧ್ಯಯನದ ಮಹತ್ವ

೧. ಬೇಡ ಮಹಿಳೆಯರು ಅನುಸರಿಸುತ್ತಿರುವ ಕೂಲಿ, ಕೃಷಿ ಮತ್ತು ಪಶುಪಾಲನೆಯಿಂದ ಅವರ ಅರ್ಥಿಕ ಅಭಿವೃದ್ದಿಗೆ ಹೇಗೆ ಸಹಾಯಕಾರಿಯಾಗಿದೆ ಎಂಬುದನ್ನು ಕಂಡುಕೊಳ್ಳುವುದು.

೨. ಬೇಡ ಸಮುದಾಯದ ಮಕ್ಕಳ ಶೈಕ್ಷಣಿಕ ಸ್ಥಿತಿ–ಗತಿಗಳನ್ನು ತಿಳಿದುಕೊಳ್ಳುವುದು.

೩. ಸರಕಾರಿ ಮತ್ತು ಖಾಸಗಿ ಕ್ಷೇತ್ರದಲ್ಲಿ ತೊಡಗಿದ ಮಹಿಳೆಯರು ತಮ್ಮ ಆರ್ಥಿಕ ಜೀವನಕ್ಕಾಗಿ ಯಾವ ಯಾವ ಕೆಲಸಗಳನ್ನು ನಿರ್ವಹಿಸುತ್ತಿದ್ದಾರೆ ಎಂಬುದನ್ನು ತಿಳಿಯಲು ನೆರವಾಗುತ್ತದೆ.

೪. ಬೇಡ ಮಹಿಳೆಯರು ಸಣ್ಣ ಅದಾಯದ ಮೂಲಕ ತಮ್ಮ ಕುಟುಂಬ ನಿರ್ವಹಣೆಯನ್ನು ಹೇಗೆ ನಿಭಾಯಿಸುತ್ತಾರೆ ಎಂಬುದನ್ನು ತಿಳಿಯಲು ನೆರವಾಗುತ್ತದೆ

೫. ಸಾಮಾಜಿಕ ಚೌಕಾಸಿಯಲ್ಲಿ ಹೇಗೆ ವ್ಯಾಪಾರ ವಹಿವಾಟು ಮಾಡುತ್ತಾರೆ ಎಂದು ತಿಳಿಯಲು ಈ ಒಂದು ಅಧ್ಯಯನದಿಂದ ನೆರವಾಗುತ್ತದೆ.

**೧.೩. ಅಧ್ಯಯನದ ವ್ಯಾಪ್ತಿ**

ಬಳ್ಳಾರಿ ಜಿಲ್ಲೆಯ ಹೋಸಪೇಟೆ ತಾಲೂಕಿನ ವಿಶ್ವ ಪ್ರಸಿದ್ದ ಹಂಪಿಯ ಪಕ್ಕದಲ್ಲಿ ಇರುವ ಕಮಲಪುರ ಎಂಬ ಪಟ್ಟಣವನ್ನು ಈ ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ ಇಲ್ಲಿ ಹೆಚ್ಚಾಗಿ ಬೇಡ ಸಮುದಾಯದವರಿದ್ದು ಕಮಲಾಪುರದ ಒಟ್ಟು ಏಳು ಕೇರಿಯ ಬೇಡ ಮಹಿಳೆಯರನ್ನು ಗಮನದಲ್ಲಿಟ್ಟುಕೊಂಡು ಅವರ ಆರ್ಥಿಕತೆಯ ಬಗ್ಗೆ ಅಧ್ಯಯನ ಕೈಗೊಳ್ಳಲಾಗಿದೆ. ಬಂಡೇಕೇರಿ, ಚೌಡಿಕೇರಿ, ತಿಮ್ಮನಾಥಕೇರಿ, ಹಿರೇಕೇರಿ, ಮನ್ಮಥಕೇರಿ, ತಳವಾರಕೇರಿ, ಗೋನಳ್‌ಕೇರಿ, ಈ ಎಲ್ಲ ಕೇರಿಗಳಿಗೂ ಒಂದೊಂದು ಚಾರಿತ್ರಿಕ ಹಿನ್ನೆಲೆಯಿದೆ. ಈ ಕೇರಿಗಳಲ್ಲಿ ಮಹಿಳೆಯರ ಆರ್ಥಿಕ ದೃಷ್ಟಿಯನ್ನು ಗಮನಿಸಲಾಗಿದೆ ಪ್ರತಿ ಕೇರಿಗಳಲ್ಲಿ ಮಹಿಳೆಯರ ಪಶುಪಾಲನೆ, ಕೃಷಿ, ಕೂಲಿ, ಕೃಷಿಕೂಲಿ ಹೀಗೆ ಇತರೆ ಬೇರೆ ಬೇರೆ ವಲಯಗಳಲ್ಲಿ ಮಹಿಳೆಯರ ಆರ್ಥಿಕ ಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಪ್ರತಿ ಕೇರಿಯಲ್ಲಿ ೪೦ ಮಹಿಳೆಯರನ್ನು ಸಂದರ್ಶನದ ಮೂಲಕ ಅಧ್ಯಯನ ನಡೆಸಲಾಗಿದೆ. ಇವರಲ್ಲಿ ಹೆಚ್ಚಾಗಿ ಕೃಷಿಕರು, ಕೂಲಿಕಾರ್ಮಿಕರು, ವ್ಯಾಪಾರಸ್ಥರು, ತರಕಾರಿ ವ್ಯಾಪಾರ, ಪಶುಪಾಲನೆ ಮಾಡುವವರು ಕಂಡುಬಂದಿದ್ದಾರೆ ಕೆಲವರು ಸರಕಾರಿ, ಅರೆಕಾಲಿಕ ನೌಕರರು ಕಂಡುಬರುತ್ತಿದ್ದು, ಅವರ ಸಾಕ್ಷರತೆ ಮತ್ತು ರಾಜಕೀಯ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಮತ್ತು ಇದರಿಂದ ಅವರ ಆರ್ಥಿಕದ ಸ್ಥಿತಿ ಹೇಗೆ ಇದೆ ಎಂಬುದನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ, **ಬಂಡೇಕೇರಿಯ** ೪೦ ಮಹಿಳೆಯರಲ್ಲಿ ೧೦ ಮಹಿಳೆಯರು ಸಾಮಾನ್ಯ ಕೂಲಿ, ೧೦ ಜನ ಕೃಷಿಕೂಲಿ, ೧೦ ಜನ ಮಹಿಳೆಯರು ಗಾರೆ ಕೆಲಸ, ಸಣ್ಣ ಪ್ರಮಾಣದ ವ್ಯಾಪಾರದಲ್ಲಿ ೫ ಜನ ಮಹಿಳೆಯರು ಮತ್ತು ತರಕಾರಿ ಮಹಿಳೆಯರನ್ನು ಈ ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿರುತ್ತಾರೆ. ಇದರಲ್ಲಿ ಸರಕಾರಿ ನೌಕರಿ ಮತ್ತು ಖಾಸಗಿ ನೌಕರಿಯನ್ನು ಯಾವ ಮಹಿಳೆಯರು ಪಡೆದಿಲ್ಲ ಎಂಬುದು ಕ್ಷೇತ್ರಕಾರ್ಯದ ಮುಖಾಂತರ ಕಂಡುಕೊಳ್ಳಲಾಗಿದೆ.

**ತಿಮ್ಮನಾಥಕೇರಿಯ** ೪೦ ಮಹಿಳೆಯರಲ್ಲಿ ೧೦ ಮಹಿಳೆಯರು ಸಾಮಾನ್ಯ ಕೂಲಿ, ೧೦ ಜನ ಕೃಷಿಕೂಲಿ, ೫ ಜನ ಮಹಿಳೆಯರು ಗಾರೆ ಕೆಲಸ, ಸರಕಾರಿ ನೌಕರಿ ಒಬ್ಬ ಮಹಿಳೆ, ಖಾಸಗಿ ನೌಕರಿ ಒಬ್ಬ ಮಹಿಳೆ, ದೇವಸ್ಥಾನದ ಕಾರ್ಯಚಟುವಟಿಕೆಗಳನ್ನು ನಿರ್ವಹಿಸುವ ಮಹಿಳೆಯರ ಸಂಖ್ಯೆ ೬, ಕಿರಾಣಿ ವ್ಯಾಪಾರ ಇಬ್ಬರು ಮಹಿಳೆಯರು, ತರಕಾರಿ ವ್ಯಾಪಾರ ೫ ಜನ ಮಹಿಳೆಯರು ಇದರಲ್ಲಿ ಸರಕಾರಿ ಮತ್ತು ಖಾಸಗಿ ನೌಕರಿ ಮಾಡುವವರು ಮಹಿಳೆಯರು ಬೆರಳಣಿಕೆಯಷ್ಟು ಕಾಣಲಾಗಿದೆ.

**ಚೌಡಿಕೇರಿಯ** ೪೦ ಮಹಿಳೆಯರಲ್ಲಿ ೧೫ ಮಹಿಳೆಯರು ಸಾಮಾನ್ಯ ಕೂಲಿ, ೧೦ ಜನ ಕೃಷಿಕೂಲಿ, ೫ ಜನ ಮಹಿಳೆಯರು ಗಾರೆ ಕೆಲಸ, ಸರಕಾರಿ ನೌಕರಿ ಇಬ್ಬರು ಮಹಿಳೆ, ಖಾಸಗಿ ನೌಕರಿ ಇಬ್ಬರು ಮಹಿಳೆಯರು, ದೇವಸ್ಥಾನದ ಕಾರ್ಯಚಟುವಟಿಕೆಗಳನ್ನು ನಿರ್ವಹಿಸುವ ಮಹಿಳೆಯರ ಸಂಖ್ಯೆ ೨, ಕಿರಾಣಿ ವ್ಯಾಪಾರ ಇಬ್ಬರು ಮಹಿಳೆಯರು, ತರಕಾರಿ ವ್ಯಾಪಾರ ೨ ಜನ ಮಹಿಳೆಯರು ಎಂಬುದು ಕಂಡುಬರುತ್ತದೆ.

**ಮನ್ಮಥಕೇರಿಯ** ೪೦ ಮಹಿಳೆಯರಲ್ಲಿ ೫ ಮಹಿಳೆಯರು ಸಾಮಾನ್ಯ ಕೂಲಿ, ೧೦ ಜನ ಕೃಷಿಕೂಲಿ, ೧೦ ಜನ ಮಹಿಳೆಯರು ಗಾರೆ ಕೆಲಸ, ಸರಕಾರಿ ನೌಕರಿ, ಖಾಸಗಿ ನೌಕರಿಯ ಮಹಿಳೆಯರು ಕಣ್ಮರೆಯಾಗಿದ್ದು, ದೇವಸ್ಥಾನದ ಕಾರ್ಯಚಟುವಟಿಕೆ ನಿರ್ವಹಿಸುವ ಮಹಿಳೆಯರು ಇಲ್ಲ, ಕಿರಾಣಿ ವ್ಯಾಪಾರ ೫ ಜನ ಮಹಿಳೆಯರು, ತರಕಾರಿ ವ್ಯಾಪಾರ ೫ ಜನ ಮಹಿಳೆಯರು ಕ್ಷೇತ್ರಕಾರ್ಯದ ಮುಖಾಂತರ ಮನ್ಮಥಕೇರಿಯಲ್ಲಿ ಸರಕಾರಿ ನೌಕರಿ ಮತ್ತು ಖಾಸಗಿ ನೌಕರಿ ಮಾಡುವವರ ಮಹಿಳೆಯರ ಸಂಖ್ಯೆ ಇಲ್ಲವೆಂಬುದು ಕಂಡುಕೊಳ್ಳಲಾಗಿದೆ.

**ಹಿರೇಕೇರಿಯ** ೪೦ ಮಹಿಳೆಯರಲ್ಲಿ ೧೦ ಮಹಿಳೆಯರು ಸಾಮಾನ್ಯ ಕೂಲಿ, ೫ ಜನ ಕೃಷಿಕೂಲಿಯನ್ನು, ೧೦ ಜನ ಮಹಿಳೆಯರು ಗಾರೆ ಕೆಲಸವನ್ನು, ೫ ಜನ ಕೇಂದ್ರ ಸರಕಾರಿ ನೌಕರಿಯಲ್ಲಿರುವ ಇದ್ದು, ಖಾಸಗಿ ನೌಕರಿ ಮತ್ತು ದೇವಸ್ಥಾನದ ಕಾರ್ಯಚಟುವಟಿಕೆ ನಿರ್ವಹಿಸುವ ಮಹಿಳೆಯರ ಸಂಖ್ಯೆ ಇಲ್ಲ, ಕಿರಾಣಿ ವ್ಯಾಪಾರ ಹಾಗೂ ತರಕಾರಿ ವ್ಯಾಪಾರ ಮಾಡುವ ೧೦ ಜನ ಮಹಿಳೆಯರು ಎಂಬುದು ಕ್ಷೇತ್ರಕಾರ್ಯದ ಮೂಲಕ ಮಾಹಿತಿಯನ್ನು ಪಡೆಯಲಾಗಿದೆ.

**ಗೋನಾಳಕೇರಿಯ** ೪೦ ಮಹಿಳೆಯರಲ್ಲಿ ೧೦ ಮಹಿಳೆಯರು ಸಾಮಾನ್ಯ ಕೂಲಿ, ೧೦ ಜನ ಕೃಷಿಕೂಲಿಯನ್ನು, ೧೦ ಜನ ಮಹಿಳೆಯರು ಗಾರೆ ಕೆಲಸವನ್ನು, ಸರಕಾರಿ ನೌಕರಿ ಹಾಗೂ ಖಾಸಗಿ ನೌಕರಿ ಮಹಿಳೆಯರ ಸಂಖ್ಯೆ ಇಲ್ಲ ಜೊತೆಗೆ ದೇವಸ್ಥಾನದ ಕಾರ್ಯಚಟುವಟಿಕೆ ನಿರ್ವಹಿಸುವ ಮಹಿಳೆಯರ ಸಂಖ್ಯೆ ೫, ತರಕಾರಿ ವ್ಯಾಪಾರ ಮಾಡುವ ೫ ಜನ ಮಹಿಳೆಯರು ಎಂಬುದು ಕಂಡುಕೊಳ್ಳಲಾಗಿದೆ.

**ತಳವಾರಕೇರಿಯ** ೪೦ ಮಹಿಳೆಯರಲ್ಲಿ ೫ ಮಹಿಳೆಯರು ಸಾಮಾನ್ಯ ಕೂಲಿ, ೫ ಜನ ಕೃಷಿಕೂಲಿಯನ್ನು, ೫ ಜನ ಮಹಿಳೆಯರು ಗಾರೆ ಕೆಲಸವನ್ನು, ಸರಕಾರಿ ನೌಕರಿ, ಖಾಸಗಿ ನೌಕರಿ ಮತ್ತು ದೇವಸ್ಥಾನದ ಕಾರ್ಯಚಟುವಟಿಕೆ ನಿರ್ವಹಿಸುವ ಮಹಿಳೆಯರ ಸಂಖ್ಯೆ ಇಲ್ಲದ ಕಾರಣ ಕಿರಾಣಿ ವ್ಯಾಪಾರ ಹಾಗೂ ತರಕಾರಿ ವ್ಯಾಪಾರ ಮಾಡುವ ಮಹಿಳೆಯರ ಸಂಖ್ಯೆ ೨೫ ಎಂಬುದು ಕ್ಷೇತ್ರಕಾರ್ಯದ ಮೂಲಕ ಮಾಹಿತಿಯನ್ನು ಪಡೆಯಲಾಗಿದೆ, ಈ ಮೂಲಕ ಇನ್ನೂ ಕೆಲ ಮಹಿಳೆಯರು ವ್ಯಾಪಾರ, ಸರಕಾರದ ಕೆಲಸ, ಖಾಸಗಿ ಕೆಲಸವನ್ನು ನಿರ್ವಹಿಸುತ್ತಿದ್ದು, ಅಧ್ಯಯನ ದೃಷ್ಟಿಯಿಂದ, ಮಹಿಳೆಯರ ಆರ್ಥಿಕತೆಯ ಹಿನ್ನೆಲೆಯಲ್ಲಿ ಪ್ರತಿ ಕೇರಿಗೆ ೪೦ ಮಹಿಳೆಯರಂತೆ ಸಂದರ್ಶನಕ್ಕೆ ಬಳಸಿಕೊಂಡು ಈ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

### ೧.೪. ಅಧ್ಯಯನದ ವಿಧಾನಗಳು

ಬೇಡ ಮಹಿಳೆಯರ ಆರ್ಥಿಕ ಸ್ಥಿತಿ ಎಂಬ ಅಧ್ಯಯನಕ್ಕಾಗಿ ಪ್ರಾಥಮಿಕ ಮತ್ತು ಅನುಷಂಗಿಕ ಮಾಹಿತಿಗಳನ್ನು ವಿವಿಧ ಅಧ್ಯಯನಗಳಿಂದ ಪಡೆಯಲಾಗಿದೆ ಹಾಗೂ ಪ್ರಾಥಮಿಕ ಮತ್ತು ಅನುಷಂಗಿಕ ಆಕರಗಳನ್ನು ಅಧ್ಯಯನದ ಸಂದರ್ಭದಲ್ಲಿ ವಿಶ್ಲೇಷಣೆ ಮಾಡಲಾಗಿದೆ. ಈ ಪ್ರಬಂಧ ಕಟ್ಟಿಕೊಡಲು ಬೇಕಾಗಿರುವ ಮಾಹಿತಿಗಳನ್ನು ಈ ಕೆಳಗಿನ ವಿಧಾನಗಳನ್ನು ಅನುಸರಿಸಿ ಮಾಹಿತಿದಾರರಿಂದ ವಿಷಯ ಸಂಗ್ರಹಿಸಲಾಗಿದೆ.

#### ಪ್ರಶ್ನಾವಳಿ ವಿಧಾನ

ಬೇಡ ಮಹಿಳೆಯರ ಜೀವನ ಕ್ರಮ ಮತ್ತು ಅವರ ಆರ್ಥಿಕ ಸ್ಥಿತಿಯನ್ನು ಮತ್ತು ಅವರ ಕೃಷಿ, ವ್ಯಾಪಾರ, ಪಶುಪಾಲನೆ, ಶಿಕ್ಷಣ, ರಾಜಕೀಯ, ಸರಕಾರಿ ಕ್ಷೇತ್ರದಲ್ಲಿ ಅವರ ಬದುಕು ನಿರ್ವಹಿಸುವ ಬಗೆಯನ್ನು ಗಮನದಲ್ಲಿಟ್ಟುಕೊಂಡು ಪ್ರಶ್ನಾವಳಿಯನ್ನು ಸಿದ್ದಪಡಿಸಿದೆ. ಕ್ಷೇತ್ರಕಾರ್ಯದಲ್ಲಿ ಬೇಡ ಮಹಿಳೆಯರು ನೀಡಿದ ಉತ್ತರಗಳನ್ನು ಹಾಗೂ ಮಾಹಿತಿಯನ್ನ ದಾಖಲು ಮಾಡಿಕೊಂಡು ಅದನ್ನು ಪ್ರಬಂಧ ರಚನೆಯ ಸಂದರ್ಭದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

#### ಸಂದರ್ಶನ ವಿಧಾನ

ಕ್ಷೇತ್ರಕಾರ್ಯದಲ್ಲಿ ಆಯ್ಕೆ ಮಾಡಿಕೊಂಡ ಪ್ರಮುಖ ಬೇಡ ಮಹಿಳೆಯರೊಂದಿಗೆ ಚರ್ಚೆ ನಡೆಸಲಾಗಿದೆ. ಇಲ್ಲಿ ನಾವು ಪ್ರಶ್ನೆ ಕೇಳುವ ಮತ್ತು ಅವರು ಉತ್ತರಿಸುವ ಕ್ರಿಯೆ ಮಾತ್ರ ಇರಲಿಲ್ಲ. ಅಧ್ಯಯನಕ್ಕೆ ಸಂಬಂಧಿಸಿದ ಎಲ್ಲ ಸಣ್ಣ–ಸಣ್ಣ ವಿಷಯಗಳನ್ನು ಗುಂಪುಗಳಲ್ಲಿ ಚರ್ಚೆಯ ಮೂಲಕ ಅವರು ಕೊಟ್ಟ ಮಾಹಿತಿಯನ್ನು ದಾಖಲು ಮಾಡಿ ಇದರಿಂದ ಬೇಡ ಮಹಿಳೆಯರ ಜೀವನ ಕ್ರಮ, ಕೌಟುಂಬಿಕ ವ್ಯವಸ್ಥೆ, ಮತ್ತು ಕೃಷಿ ನಿರ್ವಹಣೆ, ಬಗ್ಗೆ ಅವರ ಅಶೋತ್ತರಗಳೇನು ಮತ್ತು

ಅವರ ವಿಚಾರಗಳೇನು ಎಂಬುದನ್ನು ಸ್ಪಷ್ಟವಾಗಿ ತಿಳಿದುಕೊಂಡು ಪ್ರಬಂಧ ಸಿದ್ದಪಡಿಸಲು ಕ್ರಮವಹಿಸಲಾಗಿದೆ.

**ಅವಲೋಕನ ವಿಧಾನ**

ಬೇಡ ಮಹಿಳೆಯರ ಆರ್ಥಿಕ ಹಾಗೂ ಸಾಮಾಜಿಕ ಚಟುವಟಿಕೆಗಳನ್ನು ಅವರ ದಿನನಿತ್ಯದ ಉತ್ಪಾದನೆ, ಉಪಜೀವನದಲ್ಲಿ ಅವರ ವೆಚ್ಚಗಳು, ದುಂದು ವೆಚ್ಚಗಳು, ಮತ್ತು ಹವ್ಯಾಸಗಳನ್ನು ಅವಲೋಕನ ಮಾಡಲಾಗಿದೆ. ಹಬ್ಬ ಹರಿದಿನಗಳಲ್ಲಿ ಅವರು ಹೇಗೆ ಹಣವನ್ನು ಖರ್ಚುಮಾಡುತ್ತಾರೆ ಮತ್ತು ಹಣದ ಕೊರತೆಯನ್ನು ನೀಗಿಸಿಕೊಳ್ಳಲು ಯಾರಿಂದ ಸಾಲ ಪಡೆಯುತ್ತಾರೆ. ಸಾಲದ ಮರುಪಾವತಿ ಹೇಗೆ ಮಾಡುತ್ತಾರೆ ಎಂಬ ಈ ವಿಚಾರಗಳನ್ನು ಈ ವಿಧಾನದ ಮೂಲಕ ಕಂಡುಕೊಂಡು ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

**ಸಹಭಾಗಿತ್ವ ವಿಧಾನ**

ಕೃಷಿ ಚಟುವಟಿಕೆಯಲ್ಲಿ ಬೇಡ ಮಹಿಳೆಯರು ಹೇಗೆ ಕಾರ್ಯ ನಿರ್ವಹಿಸುತ್ತಾರೆ ಮತ್ತು ಕೃಷಿಯ ವಿವಿಧ ಬಗೆಯ ಕೆಲಸಗಳನ್ನು ಹೇಗೆ ನಿಭಾಹಿಸುತ್ತಾರೆ ಎಂಬುದನ್ನು ಖುದ್ದಾಗಿ ವೀಕ್ಷಣೆ ಮಾಡಲಾಗಿದೆ. ಈ ವಿಧಾನದ ಮೂಲಕ ಇನ್ನು ಹಲವಾರು ವಿವಿಧ ಬಗೆಯ ವೃತ್ತಿಗಳನ್ನು ಈ ಸಮುದಾಯದ ಮಹಿಳೆಯರ ಮಾಡುತ್ತಿದ್ದಾರೆ ಎಂಬ ಕೆಲವೂಂದು ಸೂಕ್ಷ್ಮತೆಗಳನ್ನು ಅರಿಯುವುದರ ಜೊತೆಗೆ ಹಲವಾರು ಮಾಹಿತಿಯನ್ನು ಸಂಗ್ರಹಿಸಿ ಅವುಗಳನ್ನು ಈ ಪ್ರಬಂಧದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

**ಛಾಯಚಿತ್ರ ಬಳಕೆ ವಿಧಾನ**

ಬೇಡ ಮಹಿಳೆಯರನ್ನು ಸಂದರ್ಶಿಸುವ ಸಂದರ್ಭದಲ್ಲಿ ಕೆಲವು ಅಪರೂಪದ ಕ್ಷಣಗಳನ್ನು ಛಾಯಚಿತ್ರದಲ್ಲಿ ಸರೆಹಿಡಿಯಲಾಗಿದೆ. ಕೃಷಿ ಕಾರ್ಮಿಕರು, ಸರಕಾರಿ ಉದ್ಯೋಗಿಗಳು, ವಿವಿಧ ವೃತ್ತಿಗಳಲ್ಲಿ ತೂಡಗಿದ ಬೇಡ ಮಹಿಳೆಯರ ಚಿತ್ರವನ್ನು ಸೇರೆ ಹಿಡಿಯಲಾಯಿತು. ಈ ಎಲ್ಲಾ ಮಾಹಿತಿಯನ್ನು ಪ್ರಬಂಧದಲ್ಲಿ ನೀಡಲಾಗಿದೆ.

**ಗುಂಪು ಚರ್ಚೆ**

ಬೇಡ ಮಹಿಳೆಯರಿಗೆ ಭಾರತ ಹಾಗೂ ಕರ್ನಾಟಕ ಸರ್ಕಾರ ನೀಡಿರುವ ಕೃಷಿ, ಮೂಲಭೂತ ಸೌಕರ್ಯ, ಶಿಕ್ಷಣ ಮುಂತಾದ ಸೌಲಭ್ಯಗಳಿಂದ ಇವರಿಗೆ ಉಪಯೋಗ ಅಥವಾ ದುರುಪಯೋಗ ಏನಾದರೂ ಅಗಿದೆಯೇ? ಸರಕಾರದ ಸೌಲಭ್ಯದಿಂದ ಅಗಿರುವ ಉಪಯೋಗವೇನು, ಎಂಬುದನ್ನು ತಿಳಿದುಕೊಳ್ಳಲು ಕೆಲ ಮಹಿಳೆಯರ ಜೊತೆಗೂಡಿ ಗುಂಪು ಚರ್ಚೆ ಮಾಡಲಾಗಿದೆ. ಈ ಮಾಹಿತಿಯನ್ನು ಸಂಗ್ರಹಿಸಿ ಇದನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

## ೧.೫. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಕರ್ನಾಟಕ ರಾಜ್ಯದಲ್ಲಿ ಅನೇಕ ಬುಡಕಟ್ಟು ಸಮುದಾಯಗಳ ಬಗ್ಗೆ ಹಲವಾರು ಸಂಶೋಧನಾತ್ಮಕ ಅಧ್ಯಯನಗಳು ನಡೆದಿವೆಯಾದರೂ ಅವು ಕಡಿಮೆ ಎಂದೇ ಹೇಳಬಹುದು. ಅದರಲ್ಲಿ ಮುಖ್ಯವಾಗಿ ಮಹಿಳೆಯರನ್ನು ಗಮನದಲ್ಲಿಟ್ಟುಕೊಂಡು ಕಡಿಮೆ ಸಂಶೋಧನೆಗಳು ನಡೆದಿವೆ. ವಿಶೇಷವಾಗಿ ತಳಸಮುದಾಯದ ಬೇಡ ಮಹಿಳೆಯರ ಅಧ್ಯಯನಗಳು ಆಗಿದ್ದು ಕೇವಲ ಸಾಮಾಜಿಕ, ಸಾಂಸ್ಕೃತಿಕವಾಗಿ ಹಾಗೂ ಮಹಿಳೆಗೆ ಇರುವ ಸಮಸ್ಯೆ ಮತ್ತು ಸವಾಲುಗಳ ಬಗ್ಗೆ ಅಧ್ಯಯನಗಳು ನಡೆದಿವೆ. ಆದರೆ ಅವರ ವೈಯಕ್ತಿಕ ಆರ್ಥಿಕ ಜೀವನ, ಅವಳ ಆದಾಯದ ವಿವಿಧ ಮೂಲಗಳು, ಅವಳು ಸಹ ದೇಶದ ತಲಾ ಆದಾಯಕ್ಕೆ ನೆರವಾಗುತ್ತಾಳೆ ಎಂಬುದನ್ನು ಕುರಿತು ಇನ್ನೂ ಹೆಚ್ಚಿನ ಅಧ್ಯಯನಗಳು ಆಗಿಲ್ಲ. ಕೆಲ ಅಧ್ಯಯನಗಳು ನಡೆದಿದ್ದರೂ ಅವು ಅಭಿವೃದ್ಧಿ, ಸಾಮಾಜಿಕ ನ್ಯಾಯ, ಸ್ತ್ರೀಸಬಲೀಕರಣ ಇಂತಹ ವಿಷಯಗಳಲ್ಲಿ ಅಧ್ಯಯನಗಳು ನಡೆದಿವೆ. ಮಹಿಳಾ ವಿಚಾರಗಳೇ ಆಗಿದ್ದರೂ ಸಹ ಅದು ಮಹಿಳಾ ಅಭಿವೃದ್ಧಿ, ಸಾಮಾಜಿಕ ನ್ಯಾಯ, ಕುಲಶಾಸ್ತ್ರೀಯ ಮತ್ತು ಮಾನವಶಾಸ್ತ್ರೀಯ ಅಧ್ಯಯನಗಳು ನಡೆದಿದ್ದು ಇವುಗಳನ್ನು ಅನೇಕ ವಿದ್ವಾಂಸರು, ಸಮಾಜಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು ಅದರಲ್ಲೂ ವಿಶೇಷವಾಗಿ ಕನ್ನಡ ವಿಶ್ವವಿದ್ಯಾಲಯದ ಪ್ರಾಧ್ಯಾಪಕರು, ಪಿಎಚ್.ಡಿ. ಪದವೀಧರರು ಈ ಸಮುದಾಯದ ಬಗ್ಗೆ ಅಧ್ಯಯನ ಕೈಗೊಂಡು ಸಂಶೋಧನಾ ಲೇಖನಗಳು, ಪ್ರಬಂಧಗಳನ್ನು, ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಆದರೆ ಮುಖ್ಯವಾಗಿ ಕಮಲಾಪುರದ ಬೇಡ ಮಹಿಳೆಯರ ಬಗ್ಗೆ ಅವರ ಆರ್ಥಿಕತೆಯ ಬಗ್ಗೆ ಅಧ್ಯಯನ ಆಗಿಲ್ಲ. ಮುಖ್ಯವಾಗಿ ಈ ಅಧ್ಯಯನಗಳು ಬೇಡ ಸಮುದಾಯದ ಮಹಿಳೆ ಮತ್ತು ಅವರ ಸ್ಥಿತ್ಯಂತರಗಳ ಬಗ್ಗೆ ಹೆಚ್ಚು ವಿವರಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ."[೨]

"ಬೇಡ ಬೇಡತಿಯರ ಆಹಾರದ ಅವಶ್ಯಕತೆಗಾಗಿ ಬೇಟೆಯಾಡುವುದಾಗಿತ್ತು. ಅಂದರೆ ಎಷ್ಟು ಆಹಾರ ಬೇಕಿತ್ತು ಅಷ್ಟನ್ನು ಮಾತ್ರ ಬೇಟೆಯಾಡುತ್ತಿದ್ದರು. ಇದು ಅನಿವಾರ್ಯವಾದಂತೆ ಮನುಷ್ಯನು ಕ್ರೂರ ಪ್ರಾಣಿಗಳಿಂದ ಅಪಾಯ ಉಂಟಾಗಬಹುದೆಂದು ಕಾಡು ಪ್ರಾಣಿಗಳ ಬೇಟೆಯ ಅಗತ್ಯವೂ ಅವನಿಗೆ ಇತ್ತು. ಜೊತೆಗೆ ವ್ಯಕ್ತಿಯಲ್ಲಿ ಭಯ, ಭಕ್ತಿ, ಶ್ರದ್ಧೆಗಳು, ನಂಬಿಕೆಗಳು, ಆಚರಣೆಗಳಿಗೆ ಪೂರಕವಾದವು.

ಇಂತಹ ಸಂದರ್ಭದಲ್ಲಿ ಬೇಟೆಯ ಎಲ್ಲ ಸಂದರ್ಭದಲ್ಲಿ ಮಹಿಳೆಯ ಪಾಲ್ಗೊಳ್ಳುವಿಕೆಗೆ ವಿಶಿಷ್ಟವಾದ ಛಾಪನ್ನು ಮೂಡಿಸಿದೆ. ಬೇಡ ಮಹಿಳೆಯ ಪುರುಷನೊಡನೆ ಸರಿಸಮನಾಗಿ ಸಹಕಾರಿಯಾಗಿ ಬೇಟೆಯಾಡುವ ಸಾಮರ್ಥ್ಯವನ್ನು ಹೊಂದಿದ್ದಳು ಎಂದೂ ಜನಪದ ಇತಿಹಾಸದಲ್ಲಿ ಹೇರಳವಾಗಿ ದೊರೆಯುತ್ತದೆ. ಅಪಾಯಕಾರಿ ಕ್ರೂರ ಪ್ರಾಣಿಗಳಿಂದ ಬೇಡ

ಪುರುಷನಿಗೆ ಏನಾದರೂ ತೊಂದರೆಗಳು ಉಂಟಾದಾಗ ಪುರುಷನಿಗೆ ಚಿಕಿತ್ಸಿಕೆಯಾಗಿ, ವೈದ್ಯಳಾಗಿ ಬೇಡತಿಯು ರಕ್ಷಣೆ ಮಾಡುವ ಸಾಮರ್ಥ್ಯ ಹೊಂದಿದ್ದು ಬೇಟೆಯ ಮಾಂಸವನ್ನು ಸಂರಕ್ಷಿಸಿ ಆಹಾರ ತರಾಯಿಸುವಲ್ಲಿ ಎಚ್ಚರವಹಿಸುತ್ತಿದ್ದಳು.

"ಪಶುಪಾಲನೆ ಪ್ರಾರಂಭ ಹಂತದಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ತೆರಳುತ್ತಿದ್ದ ಬೇಡತಿಯರು ಜವಾಬ್ದಾರಿ ಮತ್ತಷ್ಟು ಹೆಚ್ಚಾಯಿತು. ಹೀಗೆ ಹಂತ ಹಂತವಾಗಿ ಪಶುಪಾಲನೆ, ಕೃಷಿ, ಕೃಷಿಯೇತರಗಳು ಪ್ರಾರಂಭವಾಗುತ್ತ ಬಂದಂತೆ ಮಹಿಳೆಯ ಮೇಲೆ ಹೆಚ್ಚಿನ ಜವಾಬ್ಧಾರಿಗಳು ಹೆಚ್ಚುವುದಕ್ಕೆ ಕಾರಣವಾಗುತ್ತ ಬಂದವು. ಅದರಲ್ಲಿ ಬಿತ್ತನೆ, ಕೊಯ್ಲು, ಕೃಷಿ ಸಮೃದ್ಧಿ ತಂತ್ರಗಳು ಇದರಲ್ಲಿ ಪ್ರಧಾನ ಭಾಗವಹಿಸುವಿಕೆ ಹೆಣ್ಣಿನದಾಗಿತ್ತು. ಇದರಿಂದ ಮುಂದೆ ಸಂತೆ ಜಾತ್ರೆಗಳು ಆಹಾರ ತರಕಾರಿಗಳನ್ನು ಮಾರಾಟಾ ಮಾಡಲು ಅನುಕೂಲವಾದ್ದರಿಂದ ಅವಳ ಆರ್ಥಿಕತೆಗೆ ನೆರವಾಗಲೂ ಸಹಾಯಕಾರಿಯಾಗಿವೆ".[೩]

"ಹೊಸಪೇಟೆ ತಾಲೂಕಿನ ಬೇಡ ಮಹಿಳೆಯನ್ನು ಅವಲೋಕಿಸುವುದಕ್ಕಿಂತ ಮುಂಚೆ ವಿಜಯನಗರ ಅರಸರಲ್ಲಿ ಪ್ರಖ್ಯಾತನಾದ ೨ನೇ ಹರಿಹರನು ತನ್ನ ಕೈಯಲ್ಲಿ ಇರುವಂತಹ ಪ್ರದೇಶಗಳನ್ನು ಕೆಲವೊಂದು ಪಟ್ಟಣ ಮತ್ತು ನಗರಗಳನ್ನು ಪ್ರತಿವಾರ ಸಂತೆಗಳು ಗುಂಪಾಗಿ ನಡೆಯುವಂತೆ ಮಾಡಿದ್ದನು. ಅಲ್ಲಿಗೆ ಬೇರೆ ಬೇರೆ ಪ್ರದೇಶದ ಜನರು ವಸ್ತುಗಳ ಖರೀದಿ ಮಾಡಲು ಬರುವಂತ ವ್ಯವಸ್ಥೆ ಮಾಡಿದ್ದನು. ಈ ಒಂದು ಕಾರಣಕ್ಕಾಗಿ ಮಡ್ಡಿಯ ದಂಡನಾಯಕನನ್ನು ಸಂತೆಯಲ್ಲಿ ವ್ಯಾಪಾರ ಮಾಡುವವರ ಮೇಲೆ ಕರ(ತೆರಿಗೆ) ಸಂಗ್ರಹಿಸಲು ಅವನನ್ನು ನೇಮಕ ಮಾಡಿದ್ದನು. ಸಂತೆಯ ವ್ಯಾಪಾರ ಹಾಗೂ ತೆರಿಗೆ ಸಂಗ್ರಹದಲ್ಲಿ ಬೇಡರಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಿದ್ದನು. ಇದರಿಂದಾಗಿ ತೆರಿಗೆ ಸಂಗ್ರಹಣೆ ಪುರುಷರು ವಹಿಸಿಕೊಂಡರೆ ಸಂತೆಯ ವ್ಯಾಪಾರ ಅದರಲ್ಲೂ ತರಕಾರಿ, ಹಣ್ಣು, ಹೂ, ವ್ಯಾಪಾರವನ್ನು ಸಂಪೂರ್ಣವಾಗಿ ತನ್ನ ಸಮುದಾಯದ ಬೇಡ ಮಹಿಳೆಯರಿಗೆ ನೀಡಿದ್ದನು.

ಅದೇ ಪರಂಪರೆ ಈಗಲೂ ಮುಂದುವರೆದಿದೆ ಎಂದೂ ಹೇಳಬಹುದು. ಮಹಿಳಾ ಪ್ರಧಾನ ಅಥವಾ ಸ್ತ್ರೀ ಪ್ರಧಾನ ಕುಟುಂಬ ವ್ಯವಸ್ಥೆ ಹೊಸಪೇಟೆ ತಾಲೂಕಿನಲ್ಲಿ ಬೇಡ ಸಮುದಾಯದೇ ವಿಶೇಷವಾಗಿ ಕಂಡುಬರುತ್ತದೆ. ಕುಟುಂಬದಲ್ಲಿ ಗಂಡನಿದ್ದರೂ ಸಂಪೂರ್ಣ ಮನೆಯ ಜವಾಬ್ದಾರಿ ಮತ್ತು ಆಡಳಿತ ಮಹಿಳೆಯದ್ದಾಗಿದೆ. ಇದಕ್ಕೆ ಈ ಸಮುದಾಯದ ಪುರುಷ ಅನ್ಯ ಕಾರ್ಯಗಳು ಕಾರಣವಿರಬಹುದು. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಗಂಡಸರ ಚಟುಗಳು ಇದಕ್ಕೆ ಕಾರಣವಾಗಿವೆ".[೪]

ಯಾವುದೇ ಒಂದು ಸಮುದಾಯವನ್ನು ನೋಡಿದಾಗ ಪ್ರತಿಯೊಂದರಲ್ಲಿ ತನ್ನದೇ ಆದಂತಹ ಒಂದು ಮೌಖಿಕವಾದ ಚರಿತ್ರೆ ಇರುತ್ತದೆ. ಅದರಲ್ಲಿ ಬೇಡ ಸಮುದಾಯವು ಮೌಖಿಕ ಚರಿತ್ರೆ

ಕಟ್ಟಿಕೊಡುವ ಸ್ತ್ರೀ ಸ್ವರೂಪವನ್ನು ನೋಡಿದಾಗ ಗಂಡಿಗಿಂತ ಹೆಚ್ಚಾಗಿ ಹೆಣ್ಣನ್ನು ಸಮಾನ ಗೌರವ ಪಡೆದು ನೆಮ್ಮದಿಯಾಗಿಯೇ ಬಾಳುತ್ತಿದ್ದಳು ಎಂದೂ ವಿವರಗಳು ಕಂಡುಬರುತ್ತವೆ ಎಂದೂ ವಿವರಿಸಿದ್ದಾರೆ. ಆದರೆ ಇವರು ಕೊಟ್ಟ ವಿವರಗಳು ಎಷ್ಟು ಸರಿ ಎಂದೂ ನೋಡಿದಾಗ ಇದರೊಂದಿಗೆ ಮೊಗಲಗೊಂಡ ಆಸ್ತಿಯ ಪರಿಕಲಚ್ಪುನೆಯಾಗಿರಬಹುದು, ಪ್ರಾರಂಭವಾದ ಆಳುವ ಮನೋಭಾವದ ಪುರುಷನ ದಬ್ಬಾಳಿಕೆಗೆ ಒಳಗಾದ ಮಹಿಳೆಯ ಸ್ಥಿತಿ ಹೇಗಿದೆ ಎಂದು ವಿಚಾರ ಮಾಡಲು ಹೊರಟರೆ ಅನೇಕ ಸಂಗತಿಗಳು ನಮ್ಮ ಮುಂದೆ ಕಂಡುಬರುತ್ತವೆ. ಜೊತೆಗೆ ಇದನ್ನು ತಿಳಿಯುವ ಅಗತ್ಯವೂ ಇದೆ. ಕಾಡಿನ ನೆಲೆ ಕಳೆದುಕೊಂಡು ಆ ಮೂಲಕ ಪಶುಪಾಲನೆಯನ್ನು ಕಳೆದುಕೊಂಡ ಸಮುದಾಯ ಅತಂತ್ರ ಸ್ಥಿತಿಗೆ ತಲುಪಿದೆ. ಹಿಂದೆ ಸಮುದಾಯದ ಪುರುಷರು ಪಶುಪಾಲನೆ ಮಾಡುತ್ತಿದ್ದಾಗ ಹೈನುಗಾರಿಕೆಯ ಸಂಪೂರ್ಣ ಹೊಣೆಗಾರಿಕೆ ಮಹಿಳೆಯದೇ ಆಗಿರುತ್ತಿತ್ತು. ಉತ್ಪಾದನಾ ಬದುಕನ್ನು ಮಹಿಳೆ ಇಲ್ಲಿ ಕಳೆದುಕೊಂಡಳು. ಸ್ವಯತ್ತವಾಗಿ ಬದುಕುತ್ತಿದ್ದ ಸ್ವಾಭಿಮಾನಿ ಮಹಿಳೆಯರ ಬೇರೆಯವರ ಹೊಲಗದ್ದೆಗಳಲ್ಲಿ ಕೃಷಿ ಕೆಲಸ ಮಾಡಲು ಕಾರ್ಮಿಕಳಾಗಿ ದುಡಿಯಲೇಬೇಕಾದ ಅನಿವಾರ್ಯಕ್ಕೆ ತಲೆಬಾಗಿದರು.

**ಆರ್ಥಿಕ ಪ್ರಗತಿ ಮತ್ತು ಬೇಡ ಮಹಿಳೆ**

"ಬೇಡ ಜನಾಂಗದ ಪುರುಷರು ಹಲವಾರು ಚಟ, ಕುಡಿತ ಮತ್ತು ದುಶ್ಚಟಕ್ಕೆ ಬಲಿಯಾಗಿದ್ದರೂ ಸಹ ಬೇಡ ಮಹಿಳೆಯರ ಗಂಡನನ್ನು ಎಂದೂ ತಿರಸ್ಕಾರ ಮಾಡಿದವರಲ್ಲ. ಮಹಿಳೆಯಾಗಿ, ಕೂಲಿಕಾರ್ಮಿಕಳಾಗಿ, ದುಡಿದು ಸಂಪಾದಿಸುವ ಒಂದು ಜೀವಂತ ವೃತ್ತಿಯಾಗಿಬಿಟ್ಟಿದೆ. ಹಾಗಂತ ನಾನಿಲ್ಲಿ ವರ್ಣರೂಪಿತವಾಗಿ ಹೇಳುತ್ತಿಲ್ಲ. ಅವರ ದಿನನಿತ್ಯ ರೈಸ್ ಮಿಲ್‌ಗಳಿಗೆ, ಶ್ರೀಮಂತರ ಹೊಲದಲ್ಲಿ ಬೆಳಗಿನಿಂದ ಸಂಜೆಯವರೆಗೂ ಟೊಂಕಕ್ಕೆ ಮುಡಿಯಿಟ್ಟು ಗದ್ದೆಗಳಲ್ಲಿ ದುಡಿಯುವ ಕೈಗಳಿಗೆ, ದುಶ್ಚಟಗಳಿಗೆ ಬಲಿಯಾದ ಪುರುಷರಿಂದ ಅಥವಾ ದುಡಿಯದೇ ಇರುವ ಕುರುಡುತನ, ಜೂಜಾಟ ಆಡುವ ಆಮಿಷಗಳಿಗೆ ತುತ್ತಾಗಿ ಅವರ ಬದುಕಿನುದ್ದಕ್ಕೂ ಸಮಸ್ಯೆಗಳು ಎದುರಿಸುತ್ತಿದ್ದಾರೆ".[೨]

ಬೇಡ ಸಮುದಾಯದ ಮಹಿಳೆ ಸಾಮಾನ್ಯವಾಗಿ ಮನೆಗೆಲಸದ ಜೊತೆಗೆ ಎಲ್ಲ ಕೆಲಸಗಳಲ್ಲಿ ಭಾಗಿಯಾದರೂ ಸಹ ಇವಳ ಪರಿಶ್ರಮ ಅಧಿಕವಿದ್ದರೂ ಸಹ ಇಲ್ಲಿ ಮಹಿಳೆಗೆ ಯಾವುದೇ ರೀತಿಯ ನಿರ್ಣಯಾತ್ಮಕ ಹಕ್ಕುಗಳಿರುವುದು ತುಂಬಾ ಕಡಿಮೆ. ಏಕೆಂದರೆ ಕೃಷಿ ಚಟುವಟಿಕೆಗಳಾದ ಹೊಲ ಗದ್ದೆಗಳ ಬಿತ್ತನೆಯಿಂದ ಬೆಳೆದ ಕಾಳುಗಳನ್ನು ಹಸನಗೊಳಿಸುವ ತನಕ ಇವಳು ತುಂಬಾ ಶ್ರಮವಹಿಸಿರುತ್ತಾಳೆ. ಆದರೆ ಕೃಷಿ ಉತ್ಪನ್ನಗಳಿಂದ ಬಂದ ಹಣವನ್ನು ಪುರುಷರ ಮೂಲ ಖರ್ಚು ಮಾಡುವ ಸ್ವಾತಂತ್ರ್ಯ ಪಡೆದಿದ್ದಾನೆ. ಆದರೆ ಮಹಿಳೆ ಇದನ್ನು ಕೇಳುವ ಮತ್ತು ಪ್ರಶ್ನಿಸುವ ಹಕ್ಕು ಇಲ್ಲದಂತೆ ಆಗಿ ಹೋಗಿದೆ. ಬೇಡ ಸಮುದಾಯದ ಬಹುತೇಕ ಮಹಿಳೆಯರು ಕೃಷಿ ಕೂಲಿಕಾರರು

ಇಲ್ಲಿಯೂ ಸಹ ತಾರತಮ್ಯವನ್ನು ಕಾಣುತ್ತೇವೆ. ಕೂಲಿಯ ವಿತರಣೆಯಲ್ಲಿ ಪುರುಷನು ಮಹಿಳೆಗಿಂತ ಹೆಚ್ಚು ಹಣವನ್ನು ಪಡೆಯುತ್ತಾನೆ. ಪುರುಷ ಇಲ್ಲಿ ಮಹಿಳೆಗಿಂತ ಅಧಿಕ ಶ್ರಮಹಾಕದಿದ್ದರೂ ಸಹ ಹೆಚ್ಚಿನ ಹಣವನ್ನು ಪಡೆಯುತ್ತಾನೆ. ಜೊತೆಗೆ ಮಹಿಳೆ ಕೌಟುಂಬಿಕವಾಗಿ ಮನೆಯಲ್ಲಿ ಹಲವಾರು ರೀತಿಯ ಕೆಲಸವನ್ನು ನಿರ್ವಹಿಸುತ್ತಾಳೆ. ಇಷ್ಟೆಲ್ಲಾ ಶ್ರಮಹಾಕಿ ದುಡಿದರು ಸಹ ಇವಳ ಶೋಷಣೆಯಿಂದ ಮುಕ್ತಿವಾದರೆ ಶೋಚನೀಯ ಪರಿಸ್ಥಿತಿಯಲ್ಲಿ ಬದುಕುತ್ತಿದ್ದಾಳೆ.

"ಮೂಲ ಆದಿವಾಸಿ ಜನವರ್ಗದ ಜೊತೆ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಬಂದಿರುವಂತಹ ಸಮುದಾಯವೆಂದರೆ ಅದು ಬೇಡ ಬುಡಕಟ್ಟು ಸಮುದಾಯ. ಇವರ ಮೂಲ ವೃತ್ತಿ ಬೇಟೆ. ಈ ವೃತ್ತಿಯನ್ನು ಚಲನೆಯಲ್ಲಿಲ್ಲ. ಆದರೆ ಅದರ ನೆನಪಿಗೋಸ್ಕರ ವರ್ಷದಲ್ಲಿ ಒಂದು ಭಾರಿ ಉಗಾದಿ ಹಬ್ಬದಂದು ಸಾಂಕೇತಿಕವಾಗಿ ಆಚರಣೆಯನ್ನು ಮಾಡುತ್ತಾರೆ. ಈ ಆದಿಮ ಬೇಟೆಯ ಸಂಸ್ಕೃತಿಯಿಂದ ತಮ್ಮ ಬದುಕನ್ನು ವರ್ತಮಾನದಲ್ಲಿ ನಿರ್ವಹಿಸಲು ಸಾಧ್ಯವಿಲ್ಲವೆಂದು ಅರಿತುಕೊಂಡು ಅದರ ಜೊತೆಗೆ ಪರ್ಯಾಯ ವೃತ್ತಿಯನ್ನು ಸಂದರ್ಭಕ್ಕನುಗುಣವಾಗಿ ಮೈಗೂಡಿಸಿಕೊಂಡಿರುವುದಾಗಿ ಕರ್ನಾಟಕದಲ್ಲಿ ವಾಸವಾಗಿರುವ ಬೇಡರ ಪ್ರದೇಶಗಳನ್ನು ಕಾಣಬಹುದು.

ನವರಾತ್ರಿಯಂದು ಶಕ್ತಿದೇವತೆಯಾದ ಶ್ರೀ ದುರ್ಗಯನ್ನು ಪೂಜಿಸುವ ಸಮಯದಲ್ಲಿ ಇವರಲ್ಲಿರುವಂತಹ ಆಯುಧಗಳನ್ನು ಇಟ್ಟು ಅರಿಷಿಣ, ಕುಂಕಮ, ವಿಭೂತಿ, ಹೂಹಾರ ಉದ್ದಿನಡ್ಡಿ ಹಚ್ಚಿ ಪೂಜೆ ಮಾಡುತ್ತಾರೆ. ಪೂಜೆ ಮುಗಿದ ನಂತರದ ದಿನಗಳಲ್ಲಿ ಗೋಡೆಗೆ ನೇತು ಹಾಕುತ್ತಾರೆ. ಕೆಳಗಡೆ ಇರಿಸುವುದಿಲ್ಲ. ಏಕೆಂದರೆ ಚಿಕ್ಕಮಕ್ಕಳ ಕೈಯಲ್ಲಿ ಸಿಗಬಾರದೆಂದು ಸಿಕ್ಕರೆ ಅನಾಹುತ ಆಗಬಹುದೆಂದು ಜಾಗೃತವಹಿಸುತ್ತಾರೆ. ಇನ್ನು ಇವುಗಳ ಬಗೆಗೆ ಇರುವಂತಹ ನಂಬಿಕೆಗಳ ಕುರಿತು ಕ್ಷೇತ್ರಕಾರ್ಯದಲ್ಲಿ ವಿಚಾರಣೆ ಮಾಡಿದಾಗ "ನಮ್ಮ ಕುಲಸಲಕರಣೆಗಳು ಜೀವನದಲ್ಲಿ ಅತೀ ಪ್ರಾಮುಖ್ಯತೆ ವಹಿಸಿವೆ. ಮನೆಯಲ್ಲಿ ಅಥವಾ ಗುಡಿಸಲುಗಳಲ್ಲಿ ರಾತ್ರಿ ವೇಳೆ ಮಲಗುವಂತಹ ಸಮಯದಲ್ಲಿ ಕಾಲಡಿಯಲ್ಲಿ ಕೊಡಲಿ, ಕುಡುಗೋಲು ಜೊತೆಗೆ ಪೊರಕೆ(ಕಸಬರಿಗೆ) ತುಂಬಿದ ಚರಿಗೆಯನ್ನು ಇಟ್ಟುಕೊಂಡು ಮಲಗುವುದುಂಟು. ಇವುಗಳನ್ನು ಇಟ್ಟುಕೊಂಡು ಮಲಗುವುದರಿಂದ ಭೂತ, ಪ್ರೇತ ಬರಲಾರವು ಎಂಬ ನಂಬಿಕೆಯುಂಟು. ಅದೇ ರೀತಿಯಾಗಿ ನಮ್ಮವರು ಹೊರಗಡೆ ಹೋಗುವಾಗ ಅಂದರೆ ಹೊಲಕ್ಕೆ ಹೋಗುವಾಗ ಕೈಯಲ್ಲಿ ಕೊಡಲಿ, ಕೋಲು ಇತ್ಯಾದಿ ಸಲಕರಣೆಗಳನ್ನು ತೆಗೆದುಕೊಂಡು ಹೋಗುವ ರೂಢಿಯಿದೆ".[೬]

**ಅಡಿಟಿಪ್ಪಣಿ**

೧. ವಿರೂಪಾಕ್ಷಿ ಪೂಜಾರಹಳ್ಳಿ, ಬೇಡ ಬುಡಕಟ್ಟಿನ ಚರಿತ್ರೆ ಮತ್ತು ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮, ಪುಟ.ಸಂ.೧೪೭

೨. ಮಂಜುನಾಥ ಬೇವಿನಕಟ್ಟಿ, "ವಾಲ್ಮೀಕಿ ಸಮುದಾಯದ ಮಹಿಳೆ", ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯, ಪು.ಸಂ.೨೨೩-೨೩೪.

೩. ಮಂಜುನಾಥ ಬೇವಿನಕಟ್ಟಿ(ಸಂ), ಡಾ.ಎಂ.ಉಳ್ಳೇಶ್ವರಪ್ಪ, ಹೊಸಪೇಟೆ ತಾಲೂಕಿನ ಬೇಡ ಸಮುದಾಯದ ಮಹಿಳೆ, ಪ್ರಸಾರಾಂಗ, ಕವಿಹಂ, ೨೦೦೯, ಪು.ಸಂ.೨೩೪-೨೩೫

೪. ಮಂಜುನಾಥ ಬೇವಿನಕಟ್ಟಿ(ಸಂ), ಎಸ್.ಟಿ.ರೇಖಾ, ವಾಲ್ಮೀಕಿ ಸಮುದಾಯದ ಮಹಿಳೆಯರ ಸ್ಥಿತಿಗತಿ, ಪು.ಸಂ.೨೫೭

೫. ಮಂಜುನಾಥ ಬೇವಿನಕಟ್ಟಿ(ಸಂ), ರಮೇಶ್ ಕೆ, ಬೇಡ ಮಹಿಳೆಯರ ಬದುಕು, ಪ್ರಸಾರಾಂಗ, ಕವಿಹಂ, ಪುಟ.ಸಂ.೨೮೧

೬. ಜಗದೀಶಕುಮಾರ್ ಚ.ನಾಯಕ, ಬೇಡ ಸಮುದಾಯದ ಮಹಿಳೆ(ಹೈದರಾಬಾದ್ ಕರ್ನಾಟದ ೩ ಜಿಲ್ಲೆಗಳನ್ನು ಅನುಲಕ್ಷಿಸಿ), ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ೨೦೦೯, ಪು.ಸಂ.೧೦೫

* * *

# ಅಧ್ಯಾಯ ೨

# ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

## ೨.೧. ಕಮಲಾಪುರದ ಭೌಗೋಳಿಕ ಹಿನ್ನೆಲೆ

ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಕಮಲಾಪುರ ಪಟ್ಟಣ ಸಂಪತ್‌ಭರಿತ ಸಂಪನ್ಮೂಲಗಳನ್ನು ಹೊಂದಿದ ಪ್ರದೇಶವಾಗಿದೆ. ಹೊಸಪೇಟೆಯಿಂದ ೧೧ ಕಿ.ಮೀ ದೂರದಲ್ಲಿರುವ ಈ ಪಟ್ಟಣವು ವಿಶ್ವವಿಖ್ಯಾತ 'ಹಂಪಿ'ಯ ಹಲವಾರು ಕುರುಹುಗಳು ಆಧಾರಗಳು ಕಂಡುಬರುತ್ತವೆ. ಕೃಷಿ ಈ ಪ್ರದೇಶದ ಪ್ರಾಚೀನ ವೃತ್ತಿಯಾಗಿರುವುದು ಕಂಡುಬರುತ್ತದೆ.

"ನೀರಾವರಿಗೆ ಸಂಬಂಧಿಸಿದಂತೆ ತುಂಗಭದ್ರ ಡ್ಯಾಂ ಕಟ್ಟುವುದಕ್ಕಿಂತ ಮುಂಚೆ ಹಂಪಿಯ ಶಾಸನಗಳಲ್ಲಿ ನೀರಾವರಿ ಇತ್ತು ಎಂಬುದಕ್ಕೆ ಅನೇಕ ಉಲ್ಲೇಖಗಳು ಸಿಗುತ್ತವೆ. ಒಂದನೇ ಹರಿಹರ ಮತ್ತು ಅವನ ತಮ್ಮ ಬುಕ್ಕರಾಯನು ಸೇರಿ ತುಂಗಭದ್ರ ಅಣೆಕಟ್ಟನ್ನು ಕಟ್ಟಿಸಿದರು. ಆ ನೀರನ್ನು ವ್ಯವಸಾಯಕ್ಕೆ ಬಳಸುತ್ತಿದ್ದರು. ಇದರಿಂದಾಗಿ ಸುತ್ತಮುತ್ತಲಿನ ಜನರು ಇದರ ಉಪಯೋಗ ಪಡೆದು ಕೃಷಿ ಮಾಡಲು ಪ್ರಾರಂಭಿಸಿದರು ಎಂದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ".[೧]

ಕಮಲಾಪುರ ಪ್ರದೇಶ ಫಲವತ್ತಾದ ಭೂಮಿಯನ್ನು ಹೊಂದಿದ್ದರಿಂದ ಕೃಷಿ ಚಟುವಟಿಕೆಗಳು ಇಲ್ಲಿ ಸಮೃದ್ಧವಾಗಿರುವುದು ಕಂಡುಬರುತ್ತದೆ. ಕಾರಣ ಜೊತೆಗೆ ನೀರಾವರಿ ಸೌಲಭ್ಯ ಇದ್ದದ್ದರಿಂದ ಇಲ್ಲಿ ವಿವಿಧ ರೀತಿಯ ಬೆಳೆಗಳನ್ನು ಬೆಳೆಯುತ್ತಾರೆ ಅದರಲ್ಲಿ ಮುಖ್ಯವಾಗಿ, ಭತ್ತ, ಬಾಳೆ, ತೆಂಗು, ಮಾವು ನೆಲಗಡಲೆ, ಮೆಕ್ಕೆಜೋಳ, ತರಕಾರಿ, ಹತ್ತಿ, ಜೋಳ ಮುಂತಾದವು ಪ್ರಮುಖವಾಗಿ ಬೆಳೆಗಳಾಗಿವೆ. ಈ ಪ್ರದೇಶದಲ್ಲಿ ಭತ್ತ ಮತ್ತು ಬಾಳೆಯನ್ನು ಹೆಚ್ಚಿನ ಪ್ರಮಾಣದಲ್ಲಿ

ಬೆಳೆಯಲಾಗುತ್ತದೆ. ಇಲ್ಲಿ ಜನರು ಹೆಚ್ಚಾಗಿ ಕೃಷಿಯ ಮೇಲೆ ಅವಲಂಬಿತರಾಗಿದ್ದಾರೆ ಎಂದು ಹೇಳಬಹುದು.

ಕಮಲಾಪುರ ಪಟ್ಟಣದ ಒಟ್ಟು ವಿಸ್ತೀರ್ಣ ೨೧,೯೩೪.೯೭, ೨೦೦೧ರಲ್ಲಿ ಇದೆ. ಇದರಲ್ಲಿ ಭೌಗೋಳಿಕ ಕ್ಷೇತ್ರದ ವಿಸ್ತೀರ್ಣ ೭೫,೩೪೩.೩೬ ಇರುತ್ತದೆ. ಸಾಗುವಳಿಗೆ ೩೦,೬೫೦.೨೪ ಯೋಗ್ಯವಾದ ಭೂಮಿ ಇದೆ. ಅರಣ್ಯದ ವಿಸ್ತೀರ್ಣ ೧೪,೩೮೩-೭೮ ಇದೆ ಬಂಜರು ಭೂಮಿಯಾಗಿ ೩೯,೮೬೯-೬೫ ರಷ್ಟು ವಿಸ್ತೀರ್ಣವಿದೆ.

ಕಮಲಾಪುರ ಪಟ್ಟಣವು ತೀರ ದೊಡ್ಡದಲ್ಲ ಮತ್ತು ತೀರ ಚಿಕ್ಕದಲ್ಲ. ೧೮೯೬ರಲ್ಲಿ ಕಮಲಾಪುರವನ್ನು ಟೌನ್ ಪಂಚಾಯಿತಿಯ ವ್ಯಾಪ್ತಿಗೆ ರಚಿಸಲ್ಪಟ್ಟಿದೆ. ೨೦೧೧ರ ಜನಗಣತಿಯ ಪ್ರಕಾರ ಇಲ್ಲಿನ ಒಟ್ಟು ಜನಸಂಖ್ಯೆ ೨೫,೫೫೨. ಅದರಲ್ಲಿ ಪುರುಷರು ಸಂಖ್ಯೆ ೧೨,೫೨೧ ಮತ್ತು ಮಹಿಳೆಯರು ೧೩,೦೩೧. ಇಲ್ಲಿ ಪುರುಷರಗಿಂತ ಮಹಿಳೆಯರ ಪ್ರಮಾಣ ಹೆಚ್ಚಿದೆ. ಇಲ್ಲಿ ಬ್ರಾಹ್ಮಣ, ವಾಲ್ಮೀಕಿ ಸಮುದಾಯದವರು ಹೆಚ್ಚಿನ ಪ್ರಮಾಣದಲ್ಲಿದ್ದು, ಮುಸ್ಲಿಂ, ಲಿಂಗಾಯಿತ, ಕುರುಬ, ಉಪ್ಪಾರ, ಕಮ್ಮಾರ, ಬಡಿಗ, ಅಕ್ಕಸಾಲಿಗ, ಕ್ರಿಶ್ಚಿಯನ್, ತಮಿಳರು ಮತ್ತು ತೆಲುಗರಂಥ ಸಾಕಷ್ಟು ಸಮುದಾಯಗಳು ಇಲ್ಲಿದ್ದು, ಅವರೆಲ್ಲರೂ ಅನ್ಯೋನತೆಯಿಂದ ಬಾಳುವುದನ್ನು ಕಾಣಬಹುದು.

ಕಮಲಾಪುರದಲ್ಲಿ ಸರಕಾರಿ ಆಸ್ಪತ್ರೆ, ಪದವಿ ಮಹಾವಿದ್ಯಾಲಯ, ಸರಕಾರಿ ಪದವಿ ಪೂರ್ವ ಕಾಲೇಜ ಮತ್ತು ಪ್ರೌಢಶಾಲೆಗಳಿವೆ, ಪ್ರಾಥಮಿಕ ಶಾಲೆಗಳು ಮತ್ತು ಕಸ್ತೂರಿಬಾ ಗಾಂಧಿ ವಸತಿ ಶಾಲೆ ಇದೆ, ಕಮಲಾಪುರದಲ್ಲಿ ಸಂಶೋಧನೆಗೆ ಮತ್ತು ಸ್ನಾತಕೋತ್ತರ ಪದವಿ ಪಡೆಯಲು ಕನ್ನಡ ವಿಶ್ವವಿದ್ಯಾಲಯವಿದ್ದು, ಸ್ನಾತಕೋತ್ತರ ಪದವಿ ಪಡೆಯಲು ಕನ್ನಡ ವಿಶ್ವವಿದ್ಯಾಲಯದಲ್ಲಿ ದೂರಶಿಕ್ಷಣ ವ್ಯವಸ್ಥೆ ಕಲ್ಪಿಸಲಾಗಿದೆ.

ಹೊಸಪೇಟೆ ಮುಖ್ಯವಾಗಿ ನಾಲ್ಕು ಹೋಬಳಿಗಳನ್ನು ಒಳಗೊಂಡಿರುವ ಒಂದು ತಾಲೂಕು. ಅವುಗಳೆಂದರೆ ಹೊಸಪೇಟೆ, ಮರಿಯಮ್ಮನಹಳ್ಳಿ, ಕಮಲಾಪುರ ಮತ್ತು ಕಂಪ್ಲಿ. ಅವುಗಳಲ್ಲಿ ಕಮಲಾಪುರ ಹೋಬಳಿ ಮುಖ್ಯವಾಗಿ ೨೩ ಗ್ರಾಮಗಳನ್ನು ಒಳಗೊಂಡಿದೆ. ಅದರಲ್ಲಿ ಬುಕ್ಕಸಾಗರ, ಹಂಪಿ, ಸೀತಾರಾಮತಾಂಡ ಮತ್ತು ಮಲಪನಗುಡಿ ಗ್ರಾಮ ಪಂಚಾಯತಿಗಳು. ಅವುಗಳೆಂದರೆ ಉಳಿದ ೧೯ ಗ್ರಾಮಗಳೆಂದರೆ ವೆಂಕಟಾಪುರ ಕ್ಯಾಂಪು, ನಲ್ಲಾಪುರ, ಚಿನ್ನಾಪುರ, ವೆಂಕಟಾಪುರ, ಕಡ್ಡಿರಾಂಪುರ, ಹೊಸಮಲಪನಗುಡಿ, ಕಮಲಾಪುರ, ಇಂಗಳಿಗೆ, ಕಾರಿಗನೂರು, ವಡ್ಡರಹಳ್ಳಿ, ಪಾಪಿನಾಯಕನಹಳ್ಳಿ, ಬೈಲುವದ್ದಗೇರಿ, ಕಾಕುಬಾಳು, ಗುಂಡ್ಲುವದ್ದಿಗೇರಿ, ಧರ್ಮಸಾಗರ, ಗಾದಿಗನೂರು, ಕೊಟಗಿನಹಾಳು, ೬೧ ಗೋನಾಳ, ಕಡ್ಡಿರಾಮಪುರ ಕ್ಯಾಂಪು, ಗ್ರಾಮಗಳಾಗಿವೆ. ಈ ಗ್ರಾಮದ ಎಲ್ಲಾ ಜನರ ಸಮಸ್ಯೆಗಳಿಗೆ ಕಮಲಾಪುರ ಹೋಬಳಿ ನೆರವಾಗಿದೆ.

ಈ ಗ್ರಾಮದ ಅಭಿವೃದ್ಧಿಗೆ ಮತ್ತು ಅವರ ಸಮಸ್ಯೆಗಳಿಗೆ ಸ್ಪಂದಿಸಲು ಒಂದು ನಾಡ ಕಚೇರಿ, ಪೋಸ್ಟ ಅಫೀಸ್ ಮತ್ತು ೨ ಬ್ಯಾಂಕುಗಳು ಮತ್ತು ಸಹಕಾರಿ ಕೃಷಿ ಸ್ವಸಹಾಯ ಸಂಸ್ಥೆ, ಕೃಷಿ ಬ್ಯಾಂಕು ಮತ್ತು ಪಟ್ಟಣಪಂಚಾಯಿತಿಯು ನೆರವಾಗಿದೆ.

**ಹವಾಗುಣ**

ಕಮಲಾಪುರ ಪಟ್ಟಣದ ಸುತ್ತಮುತ್ತಲಿನ ಪ್ರದೇಶ ನೀರಾವರಿ ಭೂಮಿ ಮತ್ತು ಕೆರೆಗಳನ್ನು ಹೊಂದಿರುವುದರಿಂದ ಬೇಸಿಗೆಯಲ್ಲಿ ಹೆಚ್ಚಿನ ಪ್ರಮಾಣದ ತಾಪಮಾನ ಕಂಡುಬರುವುದಿಲ್ಲ ಎಂದು ಹೇಳಬಹುದು. ಬಿಸಿಲು ಹೆಚ್ಚು ಅಂದರೆ ೪೦ ಡಿಗ್ರಿ ಸೇಲ್ಸಿಯಸ್ ಕಡಿಮೆಯೆಂದರೆ ೨೯ ಡಿಗ್ರಿ ಸೇಲ್ಸಿಯಸ್ ಇರುತ್ತದೆ. ಈ ಪ್ರದೇಶದಲ್ಲಿ ತುಂಗಭದ್ರಾ ನದಿ ಇರುವುದರಿಂದ ವಾತಾವರಣ ತಂಪಾಗಿರುತ್ತದೆ. ಬಳ್ಳಾರಿ ಜಿಲ್ಲೆಯ ಇತರೆ ಪ್ರದೇಶಕ್ಕೆ ಹೋಲಿಸಿದರೆ ನೀರಿನ ಸಮಸ್ಯೆ ಇಲ್ಲಿ ಕಡಿಮೆ ಎಂದು ಹೇಳಬಹುದು.

ಒಂದು ದೇಶದ ಆರ್ಥಿಕ ಸ್ಥಿತಿಗತಿಗಳು ಉತ್ತಮವಾಗಿರಲು ಅದು ಅಯಾ ಪ್ರದೇಶದಲ್ಲಿ ದೊರೆಯುವ ನೈಸರ್ಗಿಕ ಸಂಪನ್ಮೂಲಗಳನ್ನು ಅವಲಂಬಿಸಿರುತ್ತದೆ. ಯಾವ ಪ್ರದೇಶದಲ್ಲಿ ಹೇರಳವಾಗಿ ಸಂಪನ್ಮೂಲಗಳು ಲಭ್ಯವಾಗುತ್ತವೆಯೋ ಅಲ್ಲಿ ಹೆಚ್ಚು ಕೈಗಾರಿಕೆಗಳು ಸ್ಥಾಪನೆಯಾಗುತ್ತವೆ. ಕಮಲಾಪುರದ ಸುತ್ತಮುತ್ತಲಿನ ಈ ಪ್ರದೇಶದಲ್ಲಿ ಮ್ಯಾಂಗನೀಸ್ ಅದಿರು ದೊರೆಯುತ್ತದೆ. ವರ್ಷಕ್ಕೆ ಎರಡು ಬೆಳೆಗಳನ್ನು ಬೆಳೆಯುವಷ್ಟು ನೀರಾವರಿಯ ಅನುಕೂಲವಿದೆ. ಇತ್ತೀಚೆಗೆ ಮಳೆಯ ಪ್ರಮಾಣ ಕಡಿಮೆಯಾದ್ದರಿಂದ ಮತ್ತು ತುಂಗಭದ್ರಾ ಅಣೆಕಟ್ಟಿನಲ್ಲಿ ನೀರಿನ ಕೊರತೆ ಉಂಟಾಗಿದ್ದರಿಂದ ಕೆಲವು ರೈತರು ಮಾತ್ರ ಎರಡು ಬೆಳೆ ಬೆಳೆಯುವುದನ್ನು ಕಾಣುತ್ತೇವೆ.

**೨.೧.೧. ಜನಸಂಖ್ಯೆ**

೨೦೦೧ ರ ಜನಗಣತಿಯ ಪ್ರಕಾರ ಕಮಲಾಪುರ ಪಟ್ಟಣದ ಜನಸಂಖ್ಯೆ ೧೮,೩೬೬ ೨೦೧೧ರ ಜನಗಣತಿಯ ಪ್ರಕಾರ ೨೫,೫೫೨ ಇದೆ. ಇದರಲ್ಲಿ ಈ ಮೇಲಿನ ಕೋಷ್ಟಕದಲ್ಲಿ ಅದನ್ನು ತಿಳಿಯಪಡಿಸಲಾಗಿದೆ ಅಂದರೆ ಕಮಲಾಪುರದ ಜನಸಂಖ್ಯೆ ಹೆಚ್ಚಾಗಿರುವುದು ಈ ಮೇಲಿನ ದಾಖಲಾತಿಯಿಂದ ತಿಳಿದುಬರುತ್ತದೆ. ಅಂದರೆ ೭೧೯೩ರಷ್ಟು ಜಾಸ್ತಿಯಾಗಿರುವುದು ಕಂಡುಬರುತ್ತದೆ.

**ಲಿಂಗಾನುಪಾತ**

ಒಂದು ದೇಶದಲ್ಲಿರುವ ಒಟ್ಟು ಜನಸಂಖ್ಯೆಯಲ್ಲಿ ಸ್ತ್ರೀಯರು ಮತ್ತು ಪುರುಷರು ನಡುವಿನ ಅನುಪಾತವನ್ನು ಲಿಂಗಾನುಪಾತ ಎಂದು ಕರೆಯುತ್ತಾರೆ. ಜನಸಂಖ್ಯೆ ಸಂಯೋಜನೆಯಲ್ಲಿ ಅತ್ಯಂತ ಮುಖ್ಯವಾದ ಸಂಗತಿಯೇ ಲಿಂಗಾನುಪಾತವಾಗಿದೆ. ಕಮಲಾಪುರದಲ್ಲಿ ೨೦೧೧ ರ ಜನಗಣತಿಯ

ಪ್ರಕಾರ ೧೦೦೦ ಪುರಷರಿಗೆ ೧೦೪೦ ಮಹಿಳೆಯರು ಇಲ್ಲಿ ಇದ್ದು ಪುರುಷರಿಗಿಂತ ಮಹಿಳೆಯರ ಸಂಖ್ಯೆ ಹೆಚ್ಚಾಗಿದೆ.

**೨.೨. ಕಮಲಾಪುರದ ಐತಿಹಾಸಿಕ ಹಿನ್ನೆಲೆ**

ಕಮಲಾಪುರ ಪಟ್ಟಣವು ಬೆಟ್ಟಗುಡ್ಡಗಳಿಂದ ಕೂಡಿದೆ ಹಾಗೂ ವಿಜಯನಗರ ಕಾಲದ ಅನೇಕ ವಸ್ತುಗಳನ್ನು ಸಂಗ್ರಹಿಸಿ ವಿಜಯನಗರ ಸಾಮ್ರಾಜ್ಯದ ಅನೇಕ ಕುರುಹುಗಳನ್ನು ರಕ್ಷಿಸುವುದು ಕಂಡುಬರುತ್ತದೆ. ಅದಕ್ಕೆ ಸಾಕ್ಷಿಯಾಗಿ ಹಂಪಿ ಪ್ರಾಧಿಕಾರದಿಂದ ಕೆಲವೊಂದು ಅಂಶಗಳನ್ನು ನೋಡಬಹುದು ಮತ್ತು ಇಲ್ಲಿ ವಸ್ತುಸಂಗ್ರಹಾಲಯವು ಇದೆ. ಐತಿಹಾಸಿಕ ಮಹತ್ವವನ್ನು ಹೊಂದಿದ ಕಮಲಾಪುರದ ಬಗ್ಗೆ ಕೆಲ ಮಾಹಿತಿಗಳನ್ನು ಈ ಸಂದರ್ಭದಲ್ಲಿ ಚರ್ಚಿಸುವ ಅಗತ್ಯತೆ ಇದೆ.

ಕಮಲಾಪುರ ಅಥವಾ ಕಾಮಲಾಪುರ ಹೆಸರಿನ ಅನೇಕ ಗ್ರಾಮಗಳು ಕರ್ನಾಟಕದ ಬೇರೆ ಬೇರೆ ಜಿಲ್ಲೆಗಳಲ್ಲಿ ಕಂಡುಬರುತ್ತವೆ. ಗುಲ್ಬಾರ್ಗ ಜಿಲ್ಲೆಯಲ್ಲಿ ಕಾಮಲಾಪುರ ಎಂಬ ಊರೊಂದಿದೆ. ಜಗತ್ ಪ್ರಸಿದ್ದಿಯನ್ನು ಹೊಂದಿದ ಹಂಪಿಯಿಂದಾಗಿ ಈ ಕಮಲಾಪುರ ಬಹುತೇಕ ದೇಶ ವಿದೇಶದ ಜನರಿಗೆ ಪರಿಚಿತವಾಗಿದೆ. ಇಂದಿನ ಕಮಲಾಪುರವನ್ನು ಕಾಮಲಾಪುರ ಎಂಬ ಹೆಸರಿನಿಂದ ಕರೆಯಲಾಗುತ್ತಿತ್ತು. ಎಂಬುದನ್ನು ವಿಜಯನಗರ ಕಾಲದ ಶಾಸನಗಳು ತಿಳಿಸುತ್ತವೆ.

"ಕಮಲಾಪುರ ಎನ್ನುವ ನಾಮವನ್ನು ಹಲವು ವಿದ್ವಾಂಸರು ವಿಶ್ಲೇಷಿಸಿದ್ದಾರೆ. ಕಮಲಾಪುರದಲ್ಲಿ ಬರುವ ಕಾಮಲಾ ಎಂದರೆ ಉತ್ತಮ ಸ್ತ್ರೀ, ಲಕ್ಷ್ಮೀಯ ಇನ್ನೊಂದು ಹೆಸರು ಹಾಗೆ ಪುರ ಎಂದರೆ ಊರು, ಪಟ್ಟಣ ಎಂಬ ಉಲ್ಲೇಖವಿದೆ. ಕಾಮಲಾಪುರವೆಂದರೆ ಸ್ತ್ರೀನಗರ, ಲಕ್ಷ್ಮೀಯನಗರ ಎಂಬ ಅರ್ಥಗಳುಂಟು.

ಕಮಲಾಪುರವೆಂಬುದು ಆ ಊರಿನಲ್ಲಿರುವ ಕೆರೆಯಲ್ಲಿ ಬೆಳೆಯುವ ಹೂವಿನಿಂದಾಗಿ ಬಂದಿರುವ ಸಾಧ್ಯತೆಗಳ ಕಡೆಗೆ ನೋಡಲಾಗಿದೆ. ಕಮಲಾದೇವಿ ಎನ್ನುವ ಈ ಪ್ರದೇಶದ ಆರಾಧ್ಯ ದೈವದ ಹೆಸರಿನಿಂದಾಗಿ ಕಮಲಾಪುರ ಎಂಬ ಹೆಸರು ಬಂದಿದೆ ಎಂಬ ಅಭಿಪ್ರಾಯವಿದೆ. ಅದರೆ ಕಮಲಾದೇವಿ ಹೆಸರಿನ ದೈವ ಯಾವುದು ಅದು ಈ ಗ್ರಾಮದಲ್ಲಿದೆಯೇ ಅದರ ಕುರುಹುಗಳೆನಾದರೂ ಉಳಿದಿವೆಯ ಎನ್ನುವ ಕುರಿತು ಸ್ಪಷ್ಟ ಮಾಹಿತಿಗಳು ದೊರೆಯುವುದಿಲ್ಲ. 'ಲಕ್ಷ್ಮೀಯ' ಇನ್ನೊಂದು ಹೆಸರು ಕಾಮಲ ಎಂದಿರುವುದರಿಂದ ಈ ಪುರಕ್ಕೆ ಕಮಲಾಪುರ ಎನ್ನುವ ಹೆಸರು ಬಂದಿದೆ ಎಂದು ವಿದ್ವಾಂಸರ ತಿಳುವಳಿಕೆಯಾಗಿದೆ".[೨]

**೨.೩. ಚರಿತ್ರೆ ಮತ್ತು ಮಹಿಳೆ**

ಕಮಲಾಪುರದ ಬೇಡ ಮಹಿಳೆಯರ ಅಧ್ಯಯನದ ಪೂರ್ವ ಈ ಪ್ರದೇಶದ ಮಹಿಳೆಯರ ಚರಿತ್ರೆಯನ್ನು ತಿಳಿಯುವುದು ಅವಶ್ಯಕ. ಮಹಿಳೆಯರ ಚಾರಿತ್ರಿಕವಾದ ಅದರ ಹಿನ್ನೆಲೆ ಅದು ಇಂದು ನಿನ್ನೆಯದಲ್ಲ. ಅದಕ್ಕೆ ಹಲವಾರು ನಿದರ್ಶನಗಳಿವೆ. "ವಿಜಯನಗರ ಸಾಮ್ರಾಜ್ಯದ ಸೈನ್ಯ

ವ್ಯವಸ್ಥೆಯನ್ನು ನೋಡಿದಾಗ ಅದರಲ್ಲಿ ಮಹಿಳೆಯರ ಪಾತ್ರ ಇತ್ತು ಎಂದು ತಿಳಿಯುತ್ತದೆ. ಅದರಲ್ಲಿ ವಿಶೇಷವಾಗಿ ಸೈನ್ಯದಲ್ಲಿ ಮಹಿಳೆಯರ ಪಾತ್ರ, ಯುದ್ದದಲ್ಲಿ ಮಹಿಳೆಯರು ಭಾಗವಹಿಸುವಿಕೆ, ಅದಕ್ಕೆ ಸಾಕ್ಷಿಯಾಗಿ "ವೀರಗಲ್ಲು" ಮತ್ತು ಹಲವಾರು ಶಾಸನಗಳ ಮೇಲೆ ಮಹಿಳೆಯರ ಹೋರಾಟದ ಚಿತ್ರದ ಕುರುಹುಗಳು ಕಂಡುಬರುತ್ತವೆ. ಉದಾಹರಣೆಗೆ ಹಜಾರರಾಮ ಚಂದ್ರ ದೇಗುಲದ ಗೋಡೆ ಮೇಲಿನ ಪಟ್ಟಿಕೆಯಲ್ಲಿ ಇಬ್ಬರು ಮಹಿಳಾ ಯೋಧರು ಈಟಿಗಳನ್ನು ಹಿಡಿದು ಹೋರಾಡುತ್ತಿರುವ ದೃಶ್ಯವಿದೆ ಮತ್ತು ಸೈನಿಕರಿಗೆ ಮಹಿಳೆಯರು ಪೋಷಕ ಪಾತ್ರವನ್ನು ನಿರ್ವಹಿಸುತ್ತಿದ್ದಳು ಜೊತೆಗೆ ಆನೆಯ ಪಟ್ಟಿಸಾಲಿನಲ್ಲಿ ಆನೆಗಳ ಸವಾರಿಯನ್ನು ಮಹಿಳೆ ಮಾಡುತ್ತಿದ್ದಳು ಎಂದೂ ತಿಳಿದುಬರುತ್ತದೆ ಮತ್ತು ಯುದ್ಧದಲ್ಲಿ ಬಳಸುವ ಈಟಿ, ಭರ್ಜಿ, ಇತರ ಆಯುಧಗಳ ತಂತ್ರಗಾರಿಕೆ ಕಂಡುಕೊಂಡಿರುವುದರ ಬಗ್ಗೆ, ಯುದ್ಧರಂಗಭೂಮಿಯಲ್ಲಿ ಅವಳ ಪಾತ್ರ ಇತ್ತು ಎಂಬುದನ್ನು ಹಲವಾರು ಶಾಸನಗಳನ್ನು ಮತ್ತು ವೀರಗಲ್ಲುಗಳನ್ನು ನೋಡಿದಾಗ ತಿಳಿದುಬರುತ್ತದೆ. ವಿಜಯನಗರ ಸಾಮ್ರಾಜ್ಯದಲ್ಲಿ ಮಹಿಳೆಯರ ಬಹುಮುಖ್ಯ ಪಾತ್ರವಿದ್ದು, ಕೇವಲ ಸೈನ್ಯದಲ್ಲಿ ಮಾತ್ರವಲ್ಲದೆ ಸೈನಿಕರಿಗೆ ಆಹಾರ ಮತ್ತು ನೀರನ್ನು ಸರಬರಾಜು ಮಾಡುವ, ಸೈನಿಕರ ಮತ್ತು ರಾಜರನ್ನು ಮನರಂಜಿಸುವ ನೃತ್ಯವನ್ನು ಮಾಡುವ ಕೆಲಸವನ್ನು ಮಹಿಳೆ ಮಾಡುತ್ತಿದ್ದಳು ಅದಕ್ಕಾಗಿ ಸಾಮ್ರಾಜ್ಯದಲ್ಲಿ ಒಂದು ವೇಶ್ಯಾ ಬಜಾರ ಇರುವುದು ಕಂಡುಬರುತ್ತದೆ".[೩]

**ವಿವಿಧ ಕಾಲಘಟ್ಟದ ಚರಿತ್ರೆಯಲ್ಲಿ ಮಹಿಳೆಯರ ಸ್ಥಿತಿಗಳು**

ಮಹಿಳೆಯರ ಪಾತ್ರವನ್ನು ಭಾರತವನ್ನು ಬಿಟ್ಟು ನೋಡುವುದಾದರೆ ರೋಮ್‌ನಲ್ಲಿ ಒಂದು ಕಾಲದಲ್ಲಿ ಮಾತೃ ಪ್ರಧಾನ ಸಮಾಜವಿತ್ತು. ನಾವು ಮಾನವನ ಪೂರ್ವ ಜೀವನ ಚರಿತ್ರೆಯನ್ನು ಕೇಳಿದ್ದೇವೆ ಮನುಷ್ಯನು ಮೊದಲು ಆಹಾರಕ್ಕಾಗಿ ಬೇಟೆಯಾಡುತ್ತಿದ್ದ ನಂತರ ಒಂದು ಕಡೆ ನೆಲೆ ನಿಂತು ಕೃಷಿಯನ್ನು ಮಾಡಲು ಪ್ರಾರಂಭಿಸಿದ. ಈ ಕೃಷಿ ಕಾರ್ಯದಿಂದಗಿಯೇ ಅವನು ಬಹಳ ಶೀಘ್ರವಾಗಿ ನಾಗರೀಕನಾಗಲಾರಂಭಿಸಿದ. ಇದರಿಂದ ಕೆಲವೆ ಸಾವಿರ ವರ್ಷಗಳಲ್ಲಿ ಪ್ರಾಚೀನ ನಾಗರೀಕತೆಗಳು ಉಗಮಗೊಂಡವು.

"ಆಹಾರೋತ್ಪಾದನೆಗಾಗಿ ಕೃಷಿಕಾರ್ಯ ಮಾನವನ ಜೀವನದಲ್ಲಿ ಆದಂತಹ ಮಹತ್ವದ ಬದಲಾವಣೆ ಅದರ ಹುಟ್ಟು ಅದರ ಬೆಳವಣಿಗೆ ಅದರ ವಿಕಾಸವು ಚಾರಿತ್ರಿಕವಾದತಂಹ ಆವಿಷ್ಕಾರ ಇದರಿಂದಾಗಿ ಮನುಷ್ಯನ ಜೀವನದಲ್ಲಿ ಹಲವಾರು ಬದಲಾವಣೆ ಕಂಡುಬಂದು ನಾಗರೀಕತೆಯೆಡೆಗೆ ಸಾಗಲು ಕಾರಣವಾಯಿತು. ಕೃಷಿಯನ್ನು ಕಂಡುಕೊಂಡದ್ದು ಪುರುಷನಲ್ಲ. ಅದಕ್ಕೆ ಮೂಲ ಆವಿಷ್ಕಾರ ಕಂಡುಹಿಡಿದದ್ದು ಮಹಿಳೆಯೆಂದು ಹಲವಾರು ವಿದ್ವಾಂಸರ ಅಭಿಪ್ರಾಯವಾಗಿವೆ. ಅದಕ್ಕೆ ಸಾಕ್ಷಿಯಾಗಿ ಇಂದಿಗೂ ಮಹಿಳೆಯರು ಬಿತ್ತುವ ಸಂದರ್ಭದಲ್ಲಿ ಹಲವಾರು ಹಿಂದಿನ ವರ್ಷದ ಬೀಜಗಳ ಸಂಗ್ರಹಣೆಯನ್ನು ಮಾಡಿ ಅದನ್ನು ಬಟ್ಟೆಯಲ್ಲಿ ಕಟ್ಟಿ

ಉಳಿಮೆ ಮಾಡುವ ಸಮಯದಲ್ಲಿ ಅದನ್ನು ಮಣ್ಣಿನಲ್ಲಿ ಹಾಕುವುದು ಸತ್ಯದ ಒಂದು ನಿದರ್ಶನವಾಗಿದೆ. ಆದ್ದರಿಂದ ಮಹಿಳೆಯೆ ನಿಜವಾದ ಕೃಷಿಯ ಆವಿಷ್ಕಾರಕಿ, ನಂತರದ ಕಾಲದಲ್ಲಿ ನೇಗಿಲು ಎತ್ತುಗಳ ಬಳಕೆಯ ಕಾಲದಲ್ಲಿ ಕೃಷಿ ಕಾರ್ಯ ಸ್ತ್ರೀಯರಿಂದ ಪುರುಷರ ಕೈಗೆ ಬಂತು ಅದರೆ ಇದೆಲ್ಲಾ ಬಹಳ ನಂತರದ ಕಾಲದ ಮಾತು. ಕೃಷಿ ಕಾರ್ಯ ಎಲ್ಲಿಯವರೆಗೆ ಪುರುಷರ ಕೈಗೆ ಬಂದಿರಲಿಲ್ಲವೋ –ಸ್ತ್ರೀಯರ ಕೈಯಲ್ಲಿ ಇದ್ದಿತೋ– ಅದುವರೆಗೆ ಸಮಾಜದ ವ್ಯವಸ್ಥೆ ಹೇಗಿದ್ದಿತು? ಅಲ್ಲಿ ಸ್ತ್ರೀಯರೇ ಪ್ರಧಾನರು, ಮುಖ್ಯರು, ಹೀಗಾಗಿ ಆ ಕಾಲದ ಸಮಾಜಕ್ಕೆ 'ಮಾತೃ ಪ್ರಧಾನ ಸಮಾಜ' ಎಂದು ಹೆಸರು ಇದನ್ನು ನಾರೀ ಸಮಾಜ ಎಂದು ಕರೆಯಬಹುದು.

'ಚೀನಾ ದೇಶದ ದಕ್ಷಿಣ ಭಾಗದಲ್ಲಿ ಇತ್ತೀಚಿನವರೆಗೆ ಆಡಳಿತ ವ್ಯವಸ್ಥೆ ಪುರುಷರ ಕೈಯಲ್ಲಿರದೆ ಸ್ತ್ರೀಯರ ಕೈಯಲ್ಲಿದ್ದ ಜನಾಂಗವೊಂದು ವಾಸಿಸುತ್ತಿತ್ತು. ಅ ಜನಾಂಗದ ಹೆಸರು ಸುಮು ಇದರ ಜನಸಂಖ್ಯೆ ಸುಮಾರು ಮೂವತ್ತೈದು ಲಕ್ಷ. ಅವರಲ್ಲಿ ಸರ್ವೋಚ್ಚ ಶಾಸನಾಧಿಕಾರ ಅಲ್ಲಿನ ಸ್ತ್ರೀಯರ ಕೈಯಲ್ಲಿ. ಇಲ್ಲಿನ ಇನ್ನೊಂದು ಜನಾಂಗದ ಹೆಸರು ಮಯೆ–ಕುನ್, ಇವರಲ್ಲಿಯೂ ಇದೇ ವ್ಯವಸ್ಥೆ ಇಲ್ಲಿ ಒಂದು ವಿಶೇಷವಾದ ಸಂಪ್ರದಾಯವೆನೆಂದರೆ ರಾಣಿವಂಶದ ಹೆಣ್ಣು ಮಕ್ಕಳೆ ರಾಣಿಯರಾಗುತ್ತಿದ್ದರು. ಅಂದರೆ ಆಧುನಿಕ ಕಾಲದವರೆಗೆ ಈ ಜನಾಂಗಗಳಲ್ಲಿ ಮಾತೃಪ್ರಧಾನವೇ ಉಳಿದುಕೊಂಡಿದ್ದಿತು".[೪] ಹೀಗೆ ಮಹಿಳೆಯರ ಚರಿತ್ರೆಯನ್ನು ನೋಡಿದಾಗ ಮಹಿಳೆಯ ಕೇವಲ ಒಂದು ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಬೇಟೆಯಿಂದ ಹಿಡಿದು ಕೃಷಿಯನ್ನು ಮುಂದುವರಿಸಿ ಸಾಮ್ರಾಜ್ಯವನ್ನು ಕಟ್ಟುವ ಶಕ್ತಿಯನ್ನು ಅವಳು ಹೊಂದಿದ್ದಳು ಎಂಬುದಕ್ಕೆ ಅನೇಕ ನಿದರ್ಶನಗಳಿವೆ. ಜೊತೆಗೆ ಚರಿತ್ರೆಯಲ್ಲಿ ಅವಳಿಗೆ ಮಹತ್ವವಾದ ಮೌಲ್ಯವು ಇತ್ತು ಎನ್ನುವುದಕ್ಕೆ ಹಲವಾರು ಕಥೆ, ಕಾದಂಬರಿಗಳು ಕಂಡುಬರುತ್ತವೆ. ಅವರ ಕೆಲವೊಂದು ಪ್ರಸಂಗಗಳನ್ನು ನಾವು ಚರಿತ್ರೆಯ ನೆಲೆಗಟ್ಟಿನಲ್ಲಿ ವೀಕ್ಷಿಸಬಹುದು. ರಾಮಯಣ ಮಹಭಾರತವು, ಮಹಿಳೆಯರಿಗೆ ಇದ್ದ ಮೌಲ್ಯಗಳನ್ನು ಕೆಲ ಪುರಾಣಗಳು ಅವರ ಬಗ್ಗೆ ಮಾಹಿತಿಯನ್ನು ವಿವರಿಸುತ್ತವೆ.

**ಬೇಡ ಮಹಿಳೆಯರ ಸ್ಥಿತಿ**

ಪುರುಷನಿಗಿಂತ ಮಹಿಳೆ ದುರ್ಬಲಳು ಎನ್ನುವ ಅಸಮಾನತೆಯ ಹೇಳಿಕೆಗಳು ಕಂಡುಬಂದಿದ್ದು ಬಹಳ ದೀರ್ಘಕಾಲದ ವಿಚಾರವಾಗಿದೆ. ಜೊತೆಗೆ ಅದು ಸಮಾಜದಲ್ಲಿ ವಿವಿಧ ಸ್ಥಳಗಳಲ್ಲಿ ಕೊಂಡಿಯಾಗಿ ಬೆಸೆದುಕೊಂಡಿವೆ. ಇತಿಹಾಸದಲ್ಲಿ ಕಂಡುಬರುವ ರಾಜಮನೆತನದ ಮತ್ತು ಉನ್ನತ ವರ್ಗದ ಮಹಿಳೆಯರನ್ನು ಹೊರತುಪಡಿಸಿ ನೋಡುವುದಾದರೆ ಸಾಮಾನ್ಯ ಅಥವಾ ತಳ ಸಮುದಾಯದ ಮಹಿಳೆಯನ್ನು ಗುರುತಿಸಿರುವುದು ಬಹಳ ಕಡಿಮೆ. ಅದನ್ನು

ಗುರುತಿಸುವುದು ಕಷ್ಟಸಾಧ್ಯವಾಗಿದೆ. ಇದಕ್ಕೆ ಬೇಡ ಸಮುದಾಯದ ಮಹಿಳೆಯರು ಹೊರತಾಗಿಲ್ಲ. ಕಾರಣ ಭಾರತೀಯ ಸಂಸ್ಕೃತಿಯ ಒಂದು ಭಾಗವಾಗಿ ಅವರು ಇದ್ದಾರೆ.

"ಚರಿತ್ರೆಯಲ್ಲಿ ಬೇಡ ಸಮುದಾಯದಲ್ಲಿ ಮಹಿಳೆಯರನ್ನು ಗುರುತಿಸಿ ಹೇಳುವುದಾದರೆ, 'ಪಾಳೇಗಾರರು (ಅಂದರೆ ಸಂಸ್ಥಾನಿಕರು) ಮೊದಲ ವರ್ಗದಲ್ಲಿದ್ದಾರೆ. ಇವರ ಜೊತೆಗೆ ಗುರಿಕಾರರು, ಸುಬೇದಾರರು, ಸೈನಿಕರು, ಪೊಲೀಸ್ ಪಾಟೀಲ, ಕಟ್ಟಿಮನೆಯವರು, ತಳವಾರ ಮೊದಲನೆಯ ಹುದ್ದೆಯಲ್ಲಿದ್ದರೆ, ಬೇಡರು ಎರಡನೆ ವರ್ಗದಲ್ಲಿ ಇದ್ದಾರೆ. ಮೂರನೆಯ ವರ್ಗದಲ್ಲಿ ಬ್ರಾಹ್ಮಣ ಪುರೋಹಿತರು, ವೀರಶೈವರ ಕೈ ಕೆಳಗೆ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದು ಬೇಡರೆ. ಬೇಟೆ ಪಶುಪಾಲನೆಯನ್ನು ಅನುಸರಿಸಿಕೊಂಡು ಬಂದವರು ೪ನೇ ವರ್ಗದಲ್ಲಿ ಇದ್ದಾರೆ. ಈ ಮೇಲಿನ ೪ ವರ್ಗಗಳನ್ನು ನೋಡುವುದಾದರೆ ಪುರುಷರ ಬಗ್ಗೆ ಇರುವ ಅನೇಕ ವಿಚಾರಗಳು ಗೋಚರಿಸುತ್ತವೆ. ಆದರೆ ಮಹಿಳೆಯರ ಬಗ್ಗೆ ಇರುವ ವಿಚಾರಗಳನ್ನು ತಿಳಿಸಿಲ್ಲ.

ಚರಿತ್ರೆಯನ್ನು ಅವಲೋಕಿಸಿ ನೋಡಿದಾಗ ಬೇಡ ಸಮಾಜದಲ್ಲಿ ಪಾಳೇಗಾರರು (ಸಂಸ್ಥಾನಿಕರು) ಮೊದಲು ವರ್ಗವಾಗಿದ್ದರೂ, ಗುರಿಕಾರರು, ಸುಬೇದಾರರು, ಸೈನಿಕರು, ತುಪಾಕಿಯವರು, ತಳವಾರ ಮೊದಲಾದ ಹುದ್ದೆಗಳಲ್ಲಿ ಬೇಡರು ೨ನೇ ವರ್ಗದಲ್ಲಿದ್ದವರು. ದಾಸಯ್ಯ, ಪೂಜಾರಿಗಳು ೩ನೇ ವರ್ಗದಲ್ಲಿ ಯಾವುದೇ ಹುದ್ದೆ ಅಥವಾ ಅನಿರ್ಧಿಷ್ಟ ವೃತ್ತಿಯಲ್ಲಿ ಬೇಟೆ ಪಶುಪಾಲನೆಯಲ್ಲಿ ತೊಡಗಿದವರೇ ೪ನೇ ವರ್ಗದಲ್ಲಿ.

ರಾಜರು ಅನೇಕ ಬೇರೆ ರಾಜರ ಜೊತೆ ಯುದ್ಧ ಮಾಡಲು ಅನೇಕ ಬೇಡ ಸೈನಿಕರ ಪಡೆಗಳನ್ನು ಪಡೆದುಕೊಳ್ಳುತ್ತಿದ್ದರು. ಇದರಿಂದಾಗಿ ಅನೇಕ ಬೇಡ ಸಮುದಾಯದ ಪುರುಷರು ಯುದ್ಧದಲ್ಲಿ ಅಸುನೀಗಿದ ಸಂದರ್ಭದಲ್ಲಿ ಹಲವಾರು ರೀತಿಯ ಬದಲಾವಣೆಗಳು ಬೇಡ ಮಹಿಳೆಯರಲ್ಲಿ ಕಂಡುಬಂದು ಅನೇಕ ರೀತಿಯ ಸ್ಥಿತ್ಯಂತರಗಳುಂಟಾದವು. ಪರಿಣಾಮವಾಗಿ ಮಹಿಳೆಯರು ಅರಮನೆಯಲ್ಲಿ ರಾಜರಿಗೆ, ದಾಸಿಯರಾದರು, ಪರಿಚಾರಿಕೆಯಾದರು, ಕೊನೆಗೆ ಸೈನಿಕರ ಅವಶ್ಯಕತೆಗಳನ್ನು ತೀರಿಸುವ ವೇಶ್ಯಯರಾದರು. ಹೀಗೆ ಪರಿಸ್ಥಿತಿಗಳ ಒತ್ತಡದಿಂದಲೋ ಅನಿವಾರ್ಯತೆಗಳಿಂದಲೋ ಬೇಡ ಮಹಿಳೆಯರು, ಬೇಟೆ, ಬೇಸಾಯಿ, ಪಶುಪಾಲನೆ ನಂತರ ಜೀವನೋಪಾಯಕ್ಕಾಗಿ ಪರ್ಯಾಯ ಮಾರ್ಗಗಳನ್ನು ಕಂಡುಕೊಳ್ಳಬೇಕಾಯಿತು.

ಯುದ್ಧದಲ್ಲಿ ಮಡಿದ ಸೈನಿಕರ ಕುಟುಂಬದ ಮಹಿಳೆಯರು ಬಹಳ ನಿಧಾನವಾಗಿ ಮತ್ತು ಆರ್ಥಿಕ ಸಮಸ್ಯೆಗಳಿಂದಾಗಿ ಮಹಿಳೆಯರ ಸಾಮಾಜಿಕ ಮನ್ನಣೆ ಅಥವಾ ಒಪ್ಪಿಗೆಯನ್ನು ಪಡೆದ 'ಬಸವಿ' ಪರಂಪರೆಗೆ ತಲೆಬಾಗಬೇಕಾಯಿತು. "ದೇವದಾಸಿಯರು" ರಾಜಕೀಯಾಡಳಿತದಲ್ಲಿ ಯುದ್ಧಗಳಲ್ಲಿ ಪಾಲ್ಗೊಳ್ಳುತ್ತಿದ್ದರು.

"ಬೇಡ ಸಮುದಾಯದ ಮಹಿಳೆಯರಿಗಿದ್ದ ಸ್ಥಾನಮಾನಗಳು ಅವರ ಕುಟುಂಬದಲ್ಲಿ ಇದ್ದ ಪುರುಷರಿಂದ ನಿರ್ಧಾರವಾಗುತ್ತಿದ್ದವೆಂದು ತಿಳಿದುಬರುತ್ತವೆ. ಉನ್ನತ ವರ್ಗದಲ್ಲಿ ಇದ್ದ ಅಂದರೆ ಸ್ವಲ್ಪ ಮಟ್ಟಿಗೆ ಅಭಿವೃದ್ಧಿ ಹೊಂದಿದ್ದ ಬೇಡ ಮಹಿಳೆಯರು 'ನಾಗತಿ' ಎಂಬ ಹೆಸರಿನಿಂದ ಗೌರವಕ್ಕೆ ಪಾತ್ರರಾಗಿದ್ದರು. ಇಂತಹ ಮಹಿಳೆಯರು, ದೇವಾಲಯ, ಕೆರೆ, ಬಾವಿಗಳನ್ನು ಕಟ್ಟಿಸಿದ್ದರು. ಗ್ರಾಮಗಳನ್ನು ನಿರ್ಮಿಸುತ್ತಿದ್ದರು. ಶೈಕ್ಷಣಿಕ ಕೇಂದ್ರಗಳಾದ ಅಗ್ರಹಾರಗಳನ್ನು ಸ್ಥಾಪಿಸುತ್ತಿದ್ದರು".[೨]

ಬೇಡ ಮಹಿಳೆಯರು ವಾಸಿಸುವ ಪರಿಸರ ಅಥವಾ ವಾತಾವರಣವನ್ನು ನೋಡಿದಾಗ ಕೊಳಗೇರಿಗಳಿಗಿಂತ ಕನಿಷ್ಟ ಪದ್ಧತಿಯಲ್ಲಿ ಬದುಕುತ್ತಿದ್ದಾರೆ. ಅಗಲವಾದ, ಸ್ವಚ್ಛವಾದ ರಸ್ತೆಗಳಿಲ್ಲದೆ, ಮನೆಗಳ ಅಕ್ಕ-ಪಕ್ಕ ಬಿದ್ದ ಚರಂಡಿಯ ನೀರು ಹಾಗೆಯೇ ಮನೆಯ ಪಕ್ಕದಲ್ಲಿ ಹೋಗುತ್ತಿದೆ. ಜೊತೆಗೆ ಎಲ್ಲೆಂದರಲ್ಲಿ ಕಸ ಹಾಕುವುದು ಇದರಿಂದ ಹಲವಾರು ಕಾಯಿಲೆಗಳಿಗೆ ಬಲಿಯಾಗುತ್ತಿದ್ದಾರೆ. ಇಂತಹ ನೈರ್ಮಲ್ಯರಹಿತ ಕಲುಶಿತ ಪ್ರಜ್ಞೆಯಾಗಲಿ ಇವರಲ್ಲಿ ಇಲ್ಲ.

ಏಳು ಕೇರಿಗಳನ್ನು ಪ್ರತ್ಯೇಕಿಸುವಂತೆ ಗಡಿ/ಎಲ್ಲೆಗಳಾಗಲಿ ಇಲ್ಲ. ಇನ್ನು ಕೆಲ ಮಹಿಳೆಯರು ಕಾಡಿನಲ್ಲಿ ಸೌದೆಯನ್ನು ತಂದು ಅಡುಗೆ ಮಾಡುವುದು, ಅದರ ಹೊಗೆ ಕುಡಿದು ಉಬ್ಬಸ, ಅಸ್ತಮ ರೋಗಗಳಿಗೆ ಬಲಿಯಾಗುತ್ತಿದ್ದಾರೆ. ಅನೇಕರು ದೃಷ್ಟಿದೋಷವನ್ನು ಅನುಭವಿಸುತ್ತಿದ್ದಾರೆ.

**ಮಾತೃ ಪ್ರಧಾನತೆಯೆಂಬುದು ಕಟ್ಟುಕತೆ**

"ಮಾತೃ ಪ್ರಧಾನತೆಯು ಮಾನವನ ಚರಿತ್ರೆಯಲ್ಲಿ ಇತ್ತು ಎಂಬುದು ಕಲ್ಪನೆಗೆ ಕಾರಣವಾಗುತ್ತದೆ". ಇದನ್ನು ನುಸಿರಿಯೇ ಏಂಗಲ್ಸ್ ಮಾತೃ ಪ್ರಧಾನತೆಯು ಪಿತೃ ಪ್ರಧಾನತೆಗೆ ಎಡೆಗೊಟ್ಟು ಚಾರಿತ್ರಿಕ ಹಂತವೇ ಹೆಣ್ಣಿನ ಪಾಲಿನ ದೊಡ್ಡ ಸೋಲುದುರಂತ ಎಂದೂ ವ್ಯಾಖ್ಯಾನಿಸಿದೆ. ಅದರ ಜೊತೆಗೆ ಅಂಥ ಸುವರ್ಣ ಯುಗವೊಂದು ಹೆಣ್ಣಿನ ಪಾಲಿಗೆ ಎಂದೂ ಒದಗಲಿಲ್ಲ ಎಂದೇ ಬುವಾ ವಾದಿಸುತ್ತಾಳೆ. ಚರಿತ್ರೆಯ ವಿವಿಧ ಹಂತಗಳಲ್ಲಿ ಗಂಡು-ಹೆಣ್ಣನ್ನು ಬಹು ಬಗೆಯ ನಿರೀಕ್ಷೆ, ಆತಂಕ, ತಲ್ಲಣ ಹಾಗೂ ಭಯಗಳಲ್ಲಿ ನೋಡುತ್ತಾ ಭೂಮಿ ಎಂದೂ ದೇವತೆಯೆಂದು ದೂರವಾಗಿಯೇ ಇರಿಸಿ ತನ್ನಿಂದ ಹೊರತಾದದ್ದೆಂದು ತಿಳಿದನೆ ಹೊರತು ತನ್ನ ಸಹಜೀವಿಯಾಗಿ ಅವಳನ್ನು ನೋಡಲಿಲ್ಲ. ಸಮಾಜ ಎಂದರೆ ಎಂದಿದ್ದರೂ ಪುರುಷ ಎಂದೇ ಅರ್ಥ. ಪ್ರಾಚೀನ ಸಮಾಜಗಳನ್ನು ತೀವ್ರವಾಗಿ ಅಧ್ಯಯನ ಮಾಡಿದ ಲೆವಿಸ್ಟ್ರಾಸ್ ಸಾಮಾಜಿಕ ಅಧಿಕಾರ ಯಾವಾಗಲೂ ಪುರುಷನದೇ ಎಂದೇ ಗ್ರಹಿಸಿದ್ದಾನೆ. ಇದನ್ನು ಸಮರ್ಥಿಸುವ ಮುಖ್ಯ ನಿದರ್ಶನವಾಗಿ ಮಾತೃವಂಶೀಯ ವ್ಯವಸ್ಥೆಯನ್ನು ನೋಡಬಹುದು. ಅಲ್ಲಿ ವಂಶದ ಮುಂದುವರಿಕೆಗೆ ಹೆಣ್ಣು ತಲೆಮಾರಿನಲ್ಲೇ ಆದರೂ ಮನೆತನದ ಅಧಿಕಾರ ಮಾತ್ರ ಗಂಡು

ಮಕ್ಕಳಲ್ಲೇ ನೆಲೆಯಾಗುತ್ತದೆ. ಅಲ್ಲಿ ಮಹಿಳೆ ಅಧಿಕಾರದ ಮಾಧ್ಯಮವೇ ಹೊರತು ಅದರ ವಾರಸುದಾರಳಲ್ಲ.

ಹಾಗಾಗಿಯೇ ನಾಗರೀಕತೆಯ ವಿಕಾಸವನ್ನು ನೋಡಿದಾಗ ಮಾತೃವಂಶೀಯತೆಗೆ ಕೊನೆಗೊಳ್ಳುತ್ತಿದ್ದು ಪಿತೃಪ್ರಧಾನ ವ್ಯವಸ್ಥೆಯ ಆಕಸ್ಮಿಕವಾಗಿ ನೆಲೆಯೂರಿದ್ದು ಅಲ್ಲ, ಗಂಡಸಿನ ತೀವ್ರ ಕ್ರಾಂತಿಯಿಂದ ಬಂದಿದ್ದು ಅಲ್ಲ. ಮಾನವ ಜನಾಂಗದಲ್ಲಿ ಗಂಡಸು ಹುಟ್ಟಿನಿಂದಲೇ ಹೆಣ್ಣಿಗಿಂತ ಅನುಕೂಲಕರವಾಗಿ ದೈಹಿಕ ರಚನೆಯನ್ನು ಪಡೆದಿದ್ದೇ ಕಾರಣವಾಗಿ ತನ್ನನ್ನೂ ಉನ್ನತನೆಂದು ಸ್ಥಾಪಿಸಿಕೊಳ್ಳಲು ಸಾಧ್ಯವಾಯಿತು".[೬]

**ಅಡಿ ಟಿಪ್ಪಣಿಗಳು**

೧. ದೇವರಕೊಂಡಾರೆಡ್ಡಿ(ಸಂ), ಹಂಪಿ ಶಾಸನಗಳು, ಸಂಪುಟ–೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.ಸಂ.೩೯.

೨. ತಾರಿಹಳ್ಳಿ ಹನುಮಂತಪ್ಪ(ಸಂ), ಬೇಡನಾಯಕರ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಗಳು, ಡಾ.ಆರ್.ಬಿ.ಕುಮಾರ್(ಲೇ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩, ಪು.ಸಂ.೧.

೩. ಸೋಮಶೇಖರ್ ಎಸ್.ವೈ.(ಸಂ), ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧ ನೀತಿ, ಸಂಚಿಕೆ ಪ್ರಕಾಶನ, ಚಿತ್ರದುರ್ಗ, ೨೦೦೯, ಪುಟ.೩೭.

೪. ದೇವಿ ಪ್ರಸಾದ್ ಚಟ್ಟೋಪಾಧ್ಯಾಯ, ಮಾತೆಯರು ಮಾನ್ಯರಾಗಿದ್ದಾಗ, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪, ಪು.ಸ.೪೬.

೫. ಮೀನಾಕ್ಷಿ ಡಿ.(ಸಂ), ಬಸರೀಕರಣ ದಾರಿಯಲ್ಲಿ ತಳಸಮುದಾಯದವರ ಮಹಿಳೆಯರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫, ಪುಟ.೨೯.

೬. ಶ್ರೀಮತಿ ಎಚ್.ಎಸ್., ಸ್ತ್ರೀವಾದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.ಸಂ.೬೮–೬೯.

* * *

# ಅಧ್ಯಾಯ ೩

# ಬೇಡ ಮಹಿಳೆಯ ಆರ್ಥಿಕತೆ

## ೩.೧. ಕೃಷಿ ಮತ್ತು ಮಹಿಳೆ

"ಕೃಷಿಯಲ್ಲಿ ಮಹಿಳೆಗೆ ಮಹತ್ವವಾದಂತಹ ಸ್ಥಾನವಿದೆ. ಕೃಷಿಯಲ್ಲಿನ ಹಲವಾರು ಆಚರಣೆಗಳು–ಪದ್ಧತಿ, ವಿಧಾನ ಪ್ರಾರಂಭವಾಗುವುದು ಮಹಿಳೆಯಿಂದ. ಬೀಜ ಸಂಗ್ರಹಣೆಯಿಂದ ಹಿಡಿದು ಬಿತ್ತಿ ಫಲ ನೀಡುವವರೆಗೂ ಮಹಿಳೆಯರ ಪಾತ್ರ ಹೆಚ್ಚು. ಬಹುಪಾಲು ಬದುಕು ಅವಲಂಬಿತವಾದದ್ದೇ ಕೃಷಿಯ ಮೇಲೆ. ಇದರ ಆಧಾರದಲ್ಲಿಯೇ ಸಮುದಾಯದ ಸಂಪ್ರದಾಯ ಆಚರಣೆಗಳು ಪ್ರಾರಂಭವಾಗುತ್ತವೆ. ಅನ್ನ ನೀಡುವ ಭೂಮಿ ತಾಯಿಯನ್ನು ನೆಚ್ಚಿಕೊಂಡೆ ಕೃಷಿಕ, ಆಯಾಗಾರ, ಕೂಲಿಕಾರ ಎಲ್ಲರೂ ಒಕ್ಕಲುತನಕ್ಕೆ ಸಂಬಂಧಿಸಿದಂತೆ ಹಲವಾರು ಆಚರಣೆಗಳನ್ನು, ರೀತಿ–ನೀತಿಗಳನ್ನು ಸಂಪ್ರದಾಯಗಳನ್ನು ಆಚರಿಸಿಕೊಂಡು ಬಂದಿದ್ದಾರೆ; ಬರುತ್ತಲಿದ್ದಾರೆ. ಇವು ಕಂದಾಚಾರದ ಆಚರಣೆಗಳಲ್ಲ. ಇವುಗಳಲ್ಲಿ ಮುಗ್ಧತೆ ಭಕ್ತಿ, ಗೌರವ, ಸಹಬಾಳ್ವೆ ಇದೆ".[೧]

ಕಮಲಾಪುರದ ಪ್ರತಿ ಕುಟುಂಬಕ್ಕೂ ಒಂದು ಕಾಲದಲ್ಲಿ ಪೂರ್ವಜರಿಂದ ಬಂದ ಕೃಷಿಭೂಮಿ ಇತ್ತು. ಅದನ್ನು ಮೇಲ್ವರ್ಗದ ಸಮುದಾಯದವರಿಗೆ ಕಡಿಮೆ ದರದಲ್ಲಿ ನೀಡಿ ಇಂದು ಅವರ ಗದ್ದೆಗಳಲ್ಲಿ ಜೀತದಾಳುಗಳಾಗಿ ದುಡಿಯುತ್ತಿದ್ದಾರೆ ಎಂಬುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದುಬಂದ ಅಂಶವಾಗಿದೆ. ಇಂದು ಜೀತದಾಳುಗಳಾಗಿ ಬದುಕುವ ಪರಿಸ್ಥಿತಿಯಿಂದ ಬಹುಪಾಲು ಕುಟುಂಬಗಳ ಕೃಷಿಕೂಲಿಗಳಾಗಿ ಬದುಕುತ್ತಿದ್ದಾರೆ. ಅದರಲ್ಲಿ ಸ್ವಲ್ಪಮಟ್ಟಿಗೆ ಚಾವಡಿಕೇರಿಯ ಬೇಡ ಸಮುದಾಯದವರು ಕೃಷಿ ಭೂಮಿಯನ್ನು ಉಳಿಸಿಕೊಂಡು ಬಂದಿದ್ದಾರೆ. ಕೃಷಿ ಕೆಲಸವನ್ನೆ ಯೋಗ್ಯವಾಗಿಸಿಕೊಂಡಿದ್ದಾರೆ. ಭೂಮಿಯ ಪಟ್ಟ ದಾಖಲೆಗಳನ್ನು ಇಟ್ಟುಕೊಂಡಿದ್ದಾರೆ. ಕಮಲಾಪುರದ ಏಳು ಕೇರಿ ಬೇಡ ಸಮುದಾಯದವರಲ್ಲಿ ಕೃಷಿಭೂಮಿ ಕೆಲವರಲ್ಲಿ ಮಾತ್ರ ಇದೆ.

ಉಳಿದ ಕೇರಿಗಳಲ್ಲಿ ಕೃಷಿಭೂಮಿಯೇ ಇಲ್ಲ. ಕೆಲವರಲ್ಲಿ ಗುಂಟೆಗಳಲ್ಲಿ ಇದೆ. ಈ ಅಲ್ಪ ಕೃಷಿ ಜಮೀನು ಬೇಡ ಕುಟುಂಬಗಳನ್ನು ಆರ್ಥಿಕವಾಗಿ ಸಬಲೀಕರಿಸಲು ಸಾಧ್ಯವಿಲ್ಲ. ವಿಶೇಷವಾಗಿ ನಾನು ಅಧ್ಯಯನ ಮಾಡಿದ ಏಳು ಕೇರಿಯ ಪ್ರತಿ ಕೇರಿಯ ೪೦ ಕುಟುಂಬಗಳಲ್ಲಿ ಬೇಡ ಮಹಿಳೆಯ ಹೆಸರಿನ ಮೇಲೆ ಕೃಷಿ ಭೂಮಿ ಇದ್ದುದು ಕಡಿಮೆ. ಕೇರಿಯಲ್ಲಿ ೨ ಮಹಿಳೆಯರೆಂದರೆ ಹೆಚ್ಚು. ಅದರಲ್ಲಿ ಅವಳು ಕೇವಲ ಕೆಲಸ ಮಾಡುವುದು ಅಷ್ಟೆ, ಪ್ರತಿಫಲ ಪುರುಷನದ್ದಾಗಿದೆ. ಜೊತೆಗೆ ಬೇಡ ಮಹಿಳೆಯರು ಸಾವುಕಾರ, ಸ್ವಾಮಿ, ದಣಿಗಳ ಹೊಲದಲ್ಲಿ ನಿರಂತರವಾಗಿ ದುಡಿಯುತ್ತಿದ್ದಾರೆ. ಕಾರಣ ಮೇಲ್ವರ್ಗದವರು ಇವರಿಗೆ ಸಾಲ ನೀಡಿರುವುದರಿಂದ ಅದನ್ನು ತೀರಿಸಲು ಅವರ ಹೊಲಗಳಲ್ಲಿ ಗುತ್ತಿಗೆಗೆ ದುಡಿಯುವುದು ಇವರ ಕೆಲಸವಾಗಿದೆ.

**ಕೃಷಿ ಕಾರ್ಯಗಳು**

ಕಮಲಾಪುರದಲ್ಲಿ ಪುರುಷರಿಗಿಂತ ಮಹಿಳೆಯರೇ ಹೆಚ್ಚಿನ ಪ್ರಮಾಣದಲ್ಲಿ ಕೃಷಿಯಲ್ಲಿ ಹಲವಾರು ಆಚರಣೆ ಪದ್ಧತಿ ಮತ್ತು ವಿಧಿ ವಿಧಾನಗಳನ್ನು ಅನುಸರಿಸಿಕೊಂಡು ಬರುತ್ತಿದ್ದಾರೆ. ಇವರು ವೈಜ್ಞಾನಿಕ ವಿಧಾನಗಳಿಗೆ ಹೆಚ್ಚು ಒಳಗಾಗದೆ ಅವರ ನಂಬಿಕೆ, ದೇವರುಗಳ ಬಗ್ಗೆ ಹೆಚ್ಚು ಒಲವಿನಿಂದ ಕೃಷಿಯನ್ನು ಪ್ರಾರಂಭಿಸುತ್ತಾರೆ. ಬಿತ್ತನೆ ಪ್ರಾರಂಭಕ್ಕೂ ಮುಂಚೆ ಕೈಗೊಳ್ಳುವ ಕ್ರಮಗಳೆಂದರೆ.

**ಗಳೆ ಹೊಡೆಯುವುದು**

ಗಳೆ ಹೊಡೆಯವುದು ಪುರುಷರ ಕೆಲಸವಾಗಿದ್ದರೂ ಸಹ ಇದರಲ್ಲಿ ಮಹಿಳೆಯರ ಪಾಲು ದೊಡ್ಡದಾಗಿದೆ. ಮುಂಗಾರು ಹಾಗೂ ಹಿಂಗಾರು ಎಂದು ಎರಡು ಬೆಳೆಗಳನ್ನು ವಿಂಗಡಿಸಿಕೊಂಡಿರುವ ರೈತ ಮಹಿಳೆಯರು ಕೆಂಪುಮಣ್ಣಿನಲ್ಲಿ ಮೆಕ್ಕೆಜೋಳ, ಸಜ್ಜೆ, ಶೇಂಗಾ, ತೊಗರಿ ಬೀಜಗಳನ್ನು ಬಿತ್ತುವುದು ಕಪ್ಪು ಮಣ್ಣಿನ ಪ್ರಮಾಣ ಕಡಿಮೆ ಇರುವುದರಿಂದಾಗಿ ಇಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಶೇಂಗಾ, ಹತ್ತಿ ಬೆಳೆಯುತ್ತಾರೆ. ಮುಂಗಾರು ಬೆಳೆಗಳನ್ನು ಬಿತ್ತುವ ಕೆಲಸ ಸಾಮಾನ್ಯವಾಗಿ ರೋಹಿಣಿ ಮಳೆಯಿಂದಲೇ ಪ್ರಾರಂಭಗೊಳ್ಳುತ್ತದೆ. ಯುಗಾದಿಯ ನಂತರದ ದಿನಗಳಲ್ಲಿ ಸಾಮಾನ್ಯವಾಗಿ ಬೆಳಗಿನ ಜಾವ ಸುಮಾರು ೫ಗಂಟೆಗೆ ಗಳೆ ಕಟ್ಟಿಕೊಂಡು ಹೋಗಿ ಹರಗುವ, ಮಡಿಕೆ ಹೊಡೆಯುವ ಕೆಲಸ ಪುರುಷನು ಮಾಡಿದರೆ, ಮಹಿಳೆ ಅವರಿಗೆ ರೊಟ್ಟಿ, ಮುದ್ದೆ ಬುತ್ತಿಯನ್ನು ಮಾಡಿಕೊಂಡು ಹೋಗುವ ಪದ್ಧತಿ ಇದೆ.

**ಬಿತ್ತನೆ ಕಾರ್ಯ**

ಇಲ್ಲಿ ಮಹಿಳೆಯ ಪಾತ್ರ ಅತಿ ಮಹತ್ವದ್ದಾಗಿದ್ದು ಕಮಲಾಪುರದ ಬಹಳಷ್ಟು ಮಹಿಳೆಯು ಬಿತ್ತುವುದಕ್ಕಿಂತ ಮುಂಚಿತವಾಗಿ "ದೇವರ ಮೊರೆ ಹೋಗುತ್ತಾರೆ" ಬಿತ್ತುವ ಕಾರ್ಯ ಆರಂಭವಾಗುವುದಕ್ಕಿಂತ ಮೊದಲು ಸುಮಾರು ೪ ರಿಂದ ೫ ದಿನಗಳ ಮುಂಚಿತವಾಗಿ

ಸಮೀಪದ ಆಂಜನೇಯನ ದೇವಸ್ಥಾನಕ್ಕೆ ಹೋಗಿ ನಾವು ಹೊಲದಲ್ಲಿ ಯಾವುದನ್ನು ಬಿತ್ತುವುದು ಎಂದೂ ದೇವರನ್ನು ಪ್ರಶ್ನಿಸಿ ನಂತರ ಬಿತ್ತುವ ಕಾರ್ಯದಲ್ಲಿ ತೊಡಗುವ ಪದ್ಧತಿ ಇನ್ನೂ ಜೀವಂತವಾಗಿದೆ. ಕಾರಣ ದೇವರ ಕೃಪೆಯಿಂದ ಹೊಲದಲ್ಲಿ ಹೆಚ್ಚು ಫಸಲು ಸಿಗುತ್ತದೆ ಎಂಬ ನಂಬಿಕೆ ಅವರಲ್ಲಿದೆ. ಜೊತೆಗೆ ಕಡೆ ವರ್ಷ ಬಿತ್ತಿ ನಂತರ ದೊರೆತ ಕೆಲವೊಂದು ಬೀಜಗಳನ್ನು ಸಂಗ್ರಹಿಸುವುದು, ಕೆಟ್ಟ ಬೀಜಗಳನ್ನು ಬೇರ್ಪಡಿಸಿ ಬಿತ್ತುವ ಕಾರ್ಯಕ್ಕೆ ಮುಂದಾಗುತ್ತಾರೆ. ಬೀಜ ಬಿತ್ತನೆಯ ಮಾರನೆಯ ದಿನ ಕೆಲವೊಂದು ತರಕಾರಿ ಬೀಜಗಳನ್ನು ಗದ್ದೆಯ ಬದುವಿನ ಸಮೀಪದಲ್ಲಿ ಕೈಯಿಂದ ನೆಡುತ್ತಾರೆ. ಕುಂಬಳ, ಸೌತೆ, ಹಾಗಲಕಾಯಿ, ಅವರೇಕಾಯಿ ಬೀಜಗಳನ್ನು ಇಲ್ಲಿ ಮಹಿಳೆ ಬಿತ್ತುವುದನ್ನು ಗಮನಿಸಬಹುದಾಗಿದೆ. ಅದಲ್ಲದೆ ಬಿತ್ತಿ ೭ನೇ ದಿನ ಆದ ನಂತರ ಮೊಳಕೆ ಹೊಡೆದಿದೆಯಾ ಇಲ್ಲವೋ ಎಂದು ಪರೀಕ್ಷೆಯನ್ನು ಮಹಿಳೆಯರಿಗೆ ಮಾಡುತ್ತಾರೆ.

**ಕಳೆ ತೆಗೆಯುವುದು**

ಬಿತ್ತಿದ ಸ್ವಲ್ಪ ದಿನದ ನಂತರ ಬಿತ್ತಿದ ಫಲದ ಜೊತೆಗೆ ಕೆಲವೊಂದು ಕಸಕಡ್ಡಿ ಕೆಟ್ಟ ಗಿಡಗಳು ಬೆಳೆದಿರುವುದನ್ನು ಕೀಳುವುದು ಮಹಿಳೆಯೇ. ಎಲ್ಲ ಬಿತ್ತಿದ ಬೀಜಗಳು ಮೊಳಕೆ ಹೊಡೆದಿವೆಯೇ ಇಲ್ಲವೋ ಎಂದೂ ನೋಡಿ ಮೊಳಕೆಯೊಡನೆ ಬಂದ ಕಳೆಯನ್ನು ಕಿತ್ತು ಅಲ್ಲಿ ಬೇರೆ ಕೆಲವೊಂದು ಬೀಜಗಳನ್ನು ಹಾಕುತ್ತಾಳೆ. ಇಂತಹ ಸಣ್ಣ ಪುಟ್ಟ ಕೆಲಸಗಳಿಗೆ ಕೂಲಿ ಆಳುಗಳನ್ನು ಬಳಸುವುದಿಲ್ಲ. ಬೇಡ ಮಹಿಳೆಯರು ತೊಗರಿ, ಅಲಸಂದಿ, ಶೇಂಗಾ, ಕಬ್ಬು, ಹತ್ತಿ, ಮೆಕ್ಕೆಜೋಳ, ಭತ್ತ ಮತ್ತು ತರಕಾರಿ ಮುಂತಾದವುಗಳನ್ನು ತಮ್ಮ ಜಮೀನನಲ್ಲಿ ಬೆಳೆಯುವುದು ಕಂಡುಬರುತ್ತದೆ.

ಸಾಮಾನ್ಯವಾಗಿ ಬೇಡರ ಎಲ್ಲ ಹೊಲಗಳಲ್ಲಿ ಪ್ರಧಾನವಾಗಿ ಹೆಣ್ಣು ದೈವಗಳಿವೆ. ಅದರಲ್ಲಿ ಮುಖ್ಯವಾಗಿ ತಾಯಮ್ಮ, ಮಾರಮ್ಮ, ದುರುಗಮ್ಮ ಮುಂತಾದ ದೈವಗಳ ಆರಾಧನೆ. ಕೃಷಿ ಸಂಬಂಧದ ಜೊತೆಗೆ ಬೆಸೆದುಕೊಂಡಿದೆ. ಬಿತ್ತನೆ ಮಾಡುವ ಮೊದಲು ಈ ಹೆಣ್ಣು ದೈವಗಳಿಗೆ ಮಳೆಯ ಬಗ್ಗೆ ಭವಿಷ್ಯ ಕೇಳುವುದು ನಂತರ ಹೆಚ್ಚು ಫಲ ನೀಡಿದರೆ ಕೆಲವೊಂದು ಸಲ ಈ ಹೆಣ್ಣು ದೈವಕ್ಕೆ ಕುರಿಬಲಿಯನ್ನು ನೀಡುವುದು, ಜೊತೆಗೆ ಅಭಿಷೇಕ ಮಾಡುವುದು ಇನ್ನೂ ರೂಢಿಯಲ್ಲಿದೆ.

ಬೇಡ ಮಹಿಳೆಯರು ಹೆಚ್ಚಾಗಿ ಕೃಷಿಯ ಜೊತೆಗೆ ಬೇರೆ ಬೇರೆ ಕೆಲಸಗಳನ್ನು ಮಾಡಿದರೂ ಸಹ ಅವರ ಸ್ಥಿತಿ ಶೋಚನೀಯವಾಗಿದೆ. ಬೀಜ ಬಿತ್ತನೆಯಿಂದ ಹಿಡಿದು ಬೆಳೆ ಕಟಾವು ಮಾಡುವವರೆಗೂ ನಿರಂತರವಾದ ಕಾರ್ಯ ಮಾಡಿದರೂ ಬಂದಂತಹ ಆದಾಯದ ಒಂದು ಭಾಗವನ್ನೂ ಸಹ ಮಹಿಳೆ ಕೇಳುವಂತಿಲ್ಲ. ಅದು ಪುರುಷನ ಪಾಲಾಗುತ್ತದೆ. ಕಮಲಾಪುರದ ಮಹಿಳೆಯರು ಕೃಷಿಭೂಮಿಯಲ್ಲಿ ೧೦ ತಿಂಗಳು ದುಡಿದರೂ ಕೊನೆಯ ಬೇಸಿಗೆಯಲ್ಲಿ ೨ ತಿಂಗಳು ಸಹ ವಿಶ್ರಾಂತಿ ಪಡೆಯಲು ಸಾಧ್ಯವಾಗುತ್ತಿಲ್ಲ ಮತ್ತು ಅವರ ಕೃಷಿಯೇತರ ಚಟುವಟಿಕೆಗಳಿಗೆ ಹೋಗುತ್ತಿರುವುದು ಕಂಡುಬರುತ್ತದೆ. ಒಂದು ಕಡೆ ಸಂಸಾರದ ನೌಕೆ ಮತ್ತು

ಮಕ್ಕಳ ಶಿಕ್ಷಣ ಮುಂದಿನ ಭವಿಷ್ಯದ ಬಗ್ಗೆ ಚಿಂತಿಸುವ ಮನೋಭಾವ ಇಲ್ಲಿಯ ಮಹಿಳೆಯರದ್ದಾಗಿದೆ ಎಂಬುದು ಅವರು ಮಾಡುವ ಶ್ರಮದ ಆಲೋಚನೆಯನ್ನು ನಾವು ಇಲ್ಲಿ ಗುರುತಿಸಲಾಗಿದೆ. ಒಟ್ಟಾರೆಯಾಗಿ ಕಮಲಾಪುರದಲ್ಲಿ ಕೃಷಿಭೂಮಿ ನಾಯಕ ಸಮುದಾಯಕ್ಕೆ ಎಷ್ಟಿದೆ ಎಂಬುದನ್ನು ಈ ಒಂದು ಕೋಷ್ಟದ ಮೂಲಕ ಗುರುತಿಸಬಹುದು.

**ಬೇಡ ಮಹಿಳೆಯರಿಗೆ ಇರುವ ಕೃಷಿಭೂಮಿಯ ಪಟ್ಟಿ**

| ಕ್ರಸಂ. | ಕೇರಿಯ ಹೆಸರು | ಸಂದರ್ಶಿತ ಕುಟುಂಬದ ಸಂಖ್ಯೆ | ಗುತ್ತಿಗೆ ಭೂಮಿ ಎಕರೆ | ಕೃಷಿಭೂಮಿ ಸ್ವಂತದ್ದು ಎಕರೆ | ಪ್ರತಿಶತ |
|---|---|---|---|---|---|
| ೦೧. | ತಿಮ್ಮನಾಥಕೇರಿ | ೪೦ | ೨ | ೮ | ೩.೫೭ |
| ೦೨. | ಚೌಡಿಕೇರಿ | ೪೦ | ೬ | ೧೪ | ೭.೧೪ |
| ೦೩. | ಮನ್ಮಥಕೇರಿ | ೪೦ | ೧೦ | ೮ | ೬.೪೨ |
| ೦೪. | ಬಂಡೆಕೇರಿ | ೪೦ | ೨ | ೧೨ | ೫ |
| ೦೫. | ಗೋನಾಳಕೇರಿ | ೪೦ | ೫ | ೧೪ | ೬.೭೮ |
| ೦೬. | ಹಿರೇಕೇರಿ | ೪೦ | ೪ | ೧೫ | ೬.೭೮ |
| ೦೭. | ತಳವಾರ ಕೇರಿ | ೪೦ | ೩ | ೬ | ೩.೨೧ |
| | | ೨೮೦ | | | |




ಕಮಲಾಪುರದ ೭ ಕೇರಿ ಬೇಡ ಮಹಿಳೆಯರಲ್ಲಿ ಪ್ರತಿ ೪೦ ಕುಟುಂಬಗಳನ್ನು ಸಂದರ್ಶಿಸಿದಾಗ ನನಗೆ ದೊರೆತ ಮಾಹಿತಿಯ ಆಧಾರದ ಮೇಲೆ ೪೦ ಕುಟುಂಬಗಳಲ್ಲಿ ಪ್ರತಿ ಕೇರಿಗಳಲ್ಲಿ ಕೃಷಿಭೂಮಿ ಇದ್ದುದು ಕಡಿಮೆ ಎಂಬ ಆಧಾರದ ಮೇಲೆ ಇದನ್ನು ವಿವರಿಸಲಾಗಿದೆ.

ಚೌಡಿಕೇರಿಯಲ್ಲಿ ಹೆಚ್ಚಾಗಿ ಕೃಷಿಭೂಮಿ ಇದ್ದು ಇನ್ನು ಉಳಿದ ಕೇರಿಗಳಲ್ಲಿ ಕೃಷಿಭೂಮಿ ಇದ್ದರೂ ಕಡಿಮೆ. ಇದರಿಂದಾಗಿ ಬೇಡ ಮಹಿಳೆಯರು ತಮ್ಮ ಉಪಜೀವನಕ್ಕಾಗಿ ಬೇರೆ ಬೇರೆ ಕೆಲಸಗಳಲ್ಲಿ ತೊಡಗಿಕೊಂಡಿರುವುದು ಕಂಡುಬರುತ್ತದೆ. ಅದರಲ್ಲಿ ಚೌಡಿಕೇರಿಯಲ್ಲಿ ಕೃಷಿಭೂಮಿ ಹೆಚ್ಚು ನೀರಾವರಿಯಿಂದ ಕೂಡಿದ್ದು ಪ್ರತಿ ಗದ್ದೆಗಳಲ್ಲಿ ಬೋರ್‌ವೆಲ್ ಸಂಪರ್ಕವಿದ್ದುದರಿಂದ ಆರ್ಥಿಕವಾಗಿ ಸ್ವಲ್ಪ ಪ್ರಮಾಣದ ಅಭಿವೃದ್ಧಿಯನ್ನು ಹೊಂದಿದ್ದಾರೆಂಬುದು ಕಂಡುಬರುತ್ತದೆ. ಜೊತೆಗೆ ದೊಡ್ಡ ದೊಡ್ಡ ಮನೆಗಳನ್ನು ಕಟ್ಟಿಕೊಂಡಿರುವುದು ಕಂಡುಬಂದರೂ ಶಿಕ್ಷಣದಲ್ಲಿ ಇನ್ನು ಅಭಿವೃದ್ಧಿ ಕಾಣಲು ಆಗುತ್ತಿಲ್ಲ.

**೩.೨. ಕೃಷಿಕೂಲಿ**

ಕೃಷಿಯಲ್ಲಿ ನಿರ್ವಹಿಸುವ ಕೂಲಿಯನ್ನು ಕೃಷಿಕೂಲಿ ಎಂದೂ ಕರೆಯಬಹುದು. ಭಾರತದ ಹೆಚ್ಚಾಗಿ ಕೃಷಿಯ ಮೇಲೆ ಅವಲಂಬನೆಯಾಗಿದೆ. ಅದಕ್ಕಾಗಿ ೧೯೫೧ರಲ್ಲಿ ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿಗೆ ಪ್ರಾಮುಖ್ಯತೆ ನೀಡಿರುವುದನ್ನು ನೋಡಬಹುದು. ಕೃಷಿಯಲ್ಲಿ ಪುರುಷರಿಗಿಂತ ಹೆಚ್ಚಾಗಿ ಮಹಿಳೆಯರೇ ಹೆಚ್ಚು ಕೆಲಸ ನಿಭಾಯಿಸುತ್ತಾಳೆ. ಕಮಲಾಪುರದ ಬೇಡ ಮಹಿಳೆಯರಿಗೆ ಕೃಷಿಭೂಮಿ ಕಡಿಮೆ. ಇದಕ್ಕೆ ಮೂಲ ಕಾರಣ ಹಿಂದೆ ಧಣಿ, ಸ್ವಾಮಿ, ಬ್ರಾಹ್ಮಣರು ಇವರ ಕೃಷಿ ಭೂಮಿಯನ್ನು ಒತ್ತೆ ಇಟ್ಟುಕೊಂಡು ಇವರನ್ನು ಗುಲಾಮರಂತೆ ಇಂದಿನವರೆಗೂ ದುಡಿಸಿಕೊಂಡು ಬರುತ್ತಿರುವುದನ್ನು ನಾವು ನೋಡಬಹುದು. ಈಗಲೂ ಶ್ರೀಮಂತರ ಮನೆಯ ಕಟ್ಟೆಯ ಮುಂದೆ ಕುಳಿತು ಮೇಲ್ವರ್ಗದವರು ಹೇಳಿದ ಹಾಗೆ ಕೆಲಸ ಮಾಡುವ ಸಂಸ್ಕೃತಿ ಕಮಲಾಪುರದಲ್ಲಿ ಇನ್ನು ಜೀವಂತವಾಗಿದೆ. ಇಂಥದರಲ್ಲಿ ಇವರ ಆರ್ಥಿಕತೆ ಸಾಲದ ಮೇಲೆ ನಿಂತಿದೆ. ಇದು ಅಲ್ಲದೆ ಇವರ ಮನೆಯ ಮಹಿಳೆಯರನ್ನು ಅವರ ಹೊಲ ಗದ್ದೆಗಳಲ್ಲಿ ದುಡಿಯಲಿಕ್ಕೆ ಕಳುಹಿಸುತ್ತಿರುವುದು ಕಂಡುಬಂದಿದೆ. ಬೇಡ ಮಹಿಳೆಯರ ಕೃಷಿ ಕೆಲಸಕ್ಕೆ ಕಮಲಾಪುರದ ಕೆರೆಯ ಮೇಲೆ ದಿನ ಬೆಳಗಿನ ಹೊತ್ತು ಹೊರಡುವುದು ಜೊತೆಗೆ ರಾತ್ರಿ ಉಳಿದ ಅನ್ನ, ಕಾರದಪುಡಿ ಊಟವನ್ನು ಕಟ್ಟಿಕೊಂಡು ಬೆಳಿಗ್ಗೆ ೮ ರಿಂದ ೨ ಗಂಟೆಗೆಯವರೆಗೆ ದುಡಿದರೂ ಅವರ ಆರ್ಥಿಕ ಪರಿಸ್ಥಿತಿ ಸರಿದೂಗಲು ಆಗುತ್ತಿಲ್ಲ. ಪುರುಷರಿಂತ ಹೆಚ್ಚು ಕೆಲಸವನ್ನು ಕಮಲಾಪುರದ ಬೇಡ ಮಹಿಳೆಯರು ನಿರ್ವಹಿಸುತ್ತಿದ್ದಾರೆ. ಮತ್ತು ಕೃಷಿ ಜೀವನದ ಜೊತೆಗೆ ಪ್ರತಿಯೊಂದು ಹಂತದಲ್ಲಿ ದುಡಿಯುತ್ತಿದ್ದಾಳೆ, ಕೃಷಿ, ಮನೆಗೆಲಸ, ಗಾರೆಕೆಲಸ, ತೋಟಗಳಲ್ಲಿ ಕೂಲಿಯನ್ನು ಮಾಡುತ್ತಿದ್ದಾಳೆ.

**ಬೇಡ ಮಹಿಳೆಯರ ಕೂಲಿಯ ಸ್ವರೂಪಗಳು**

- ಕಬ್ಬು ಕಡಿಯುವುದು
- ಕಳೆ ತೆಗೆಯುವುದು

- ಬೀಜ ಬಿತ್ತುವುದು
- ಭತ್ತ ಕೊಯ್ಯುವುದು
- ಸಸಿ ನಾಟಿ ಮಾಡುವುದು(ಕೆಸರು ಗದ್ದೆಯಲ್ಲಿ)
- ರಾಶಿ ಮಾಡಲು ಸಹಾಯ ಮಾಡುವುದು
- ತೆನೆ ಕೊಯ್ಯುವುದು

**ಕಬ್ಬು ಕಡಿಯುವುದು**

ಈ ಎಲ್ಲಾ ಕೆಲಸಗಳನ್ನು ಮಹಿಳೆಯರೇ ಮಾಡುತ್ತಾರೆ. ಆದರೆ ಆರ್ಥಿಕ ರಂಗವನ್ನು ನಿರ್ಧರಿಸುವ ವಿಶೇಷ ಅಧಿಕಾರ ಪುರುಷ ವರ್ಗಕ್ಕೆ ಮಾತ್ರ. ಕಮಲಾಪುರದಲ್ಲಿ ಪುರುಷರಿಂದ ಮಹಿಳೆಯರ ಮೇಲಿನ ದೌರ್ಜನ್ಯಗಳು ನಡೆಯುತ್ತಲೇ ಇದೆ. "ಮಹಿಳೆ ಕೇವಲ ಕೆಲಸದ ವಸ್ತು ಎಂದು ಗುರುತಿಸಲಾಗಿದೆ". ಕಮಲಾಪುರದ ಪುರುಷರು ಕೆಲವೊಂದು ದುಶ್ಚಟಗಳಿಗೆ ಬಲಿಯಾಗಿದ್ದಾರೆ. ಇಸ್ಪೀಟ್ ಆಡುವುದು, ಮಟ್ಕಾ ಆಡುವುದು ಹೀಗೆ ಈ ಎಲ್ಲಾ ಕೆಟ್ಟ ಕೆಲಸಗಳನ್ನು ಆಮಿಷರಾಗಿ ಮಹಿಳೆಯರನ್ನು ನಿರಂತರವಾಗಿ ಶೋಷಿಸುವುದು ಮತ್ತು ಅವರ ಕಡೆಯಿಂದ ಹಣ ವಸೂಲಿ ಮಾಡುವುದರಿಂದ ಬೇಡ ಮಹಿಳೆಯರ ಆರ್ಥಿಕ ನಿರ್ವಹಣೆ ಕೆಟ್ಟದ್ದಾಗಿದ್ದು ಅವರು ಆರ್ಥಿಕವಾಗಿ ಅಭಿವೃದ್ಧಿ ಕಾಣಲು ಸಾಧ್ಯವಾಗುತ್ತಿಲ್ಲ. ಈ ಸಮಸ್ಯೆಗಳನ್ನು ನಿವಾರಿಸಬೇಕೆಂದು ಮಹಿಳೆಯರು ತಮ್ಮ ಹೊಲದಲ್ಲಿ ಅಲ್ಲದೇ ಬೇರೆಯವರ ಹೊಲ ಗದ್ದೆಗಳ ಕೆಲಸವನ್ನು ನಿರ್ವಹಿಸಿಕೊಂಡು ಬರುತ್ತಿದ್ದಾರೆ. ಬೇಡ ಮಹಿಳೆಯರು ಕಬ್ಬು ಕಡಿಯುವುದು ಒಂದು ವಿಶೇಷತೆ. ಬೆಳಗಿನ ಜಾವ ೪.೩೦ಕ್ಕೆ ಎದ್ದು ರಾತ್ರಿ ಉಳಿದ ಅನ್ನವನ್ನು ಕಟ್ಟಿಕೊಂಡು ಚಳಿಗಾಲದ ಸಂದರ್ಭದಲ್ಲಿ ಹೊಲದಲ್ಲಿ ಇಳಿದು, ಹಾವು, ಚೇಳು, ಜರಿ ಎನ್ನದೇ ಗವಿಯಂತಹ ಕಬ್ಬಿನ ಗದ್ದೆಯಲ್ಲಿ ನುಗ್ಗಿ ಒಂದಾದಾಗಿ ಕಬ್ಬನ್ನು ಹಿಡಿದು, ಸವರಿ ಕಡಿದು ಸುಮಾರು ಅರ್ಧ ಕಿ.ಮೀ. ದೂರದವರೆಗೂ ಕಬ್ಬನ್ನು ತಲೆಯ ಮೇಲೆ ಹೊತ್ತುಕೊಂಡು ಗಾಡಿಗೆ ತಂದು ಹಾಕುವುದು ಇಲ್ಲಿ ಕಂಡುಬರುತ್ತದೆ.

**ಕಳೆ ತೆಗೆಯುವುದು**

ಹೊಲದಲ್ಲಿ ಬೀಜ ಬಿತ್ತನೆ ನಡೆದ ನಂತರ ಬೆಳೆಯ ಪಕ್ಕದಲ್ಲಿ ಇದ್ದಂತಹ ಕಸ, ಕಳೆಯನ್ನು ಕುರ್ಚಿಗಿಯ ಮುಖಾಂತರ ಅದನ್ನು ತೆಗೆಯುವುದು. ಹೊಲದಲ್ಲಿ ಬಿದ್ದಿರುವಂತಹ ಕಸ ಕಡ್ಡಿಗಳನ್ನು ತೆಗೆದು ಸುಡುವುದು, ಈ ಕೆಲಸಕ್ಕೆ ಬೆಳಿಗ್ಗೆ ಎದ್ದು ಮನೆಗೆಲಸ ಮಾಡಿ ಮಕ್ಕಳಿಗೆ ಅಡಿಗೆಯನ್ನು ಮಾಡಿ ದುಡಿಯಲಿಕ್ಕೆ ಸಾಲಾಗಿ ಹೋಗುತ್ತಾರೆ. ಇಲ್ಲಿ ಕಳೆ ತೆಗೆಯುವ ಕೆಲಸಕ್ಕೆ ಬಾರಿ ಬೇಡಿಕೆ. ಕಳೆ ತೆಗೆಯುವುದು ಕಮಲಾಪುರದಲ್ಲಿ ಮೊದಲಿನಿಂದಲೂ ರೂಢಿಯಲ್ಲಿ ಬಂದಿದೆ. ಬೆಳಗಿನ ಜಾವ ಎಲ್ಲಾ ಬೇಡ ಮಹಿಳೆಯರು ೬.೩೦ಕ್ಕೆ ಅವರ ಅವರ ಕೇರಿಯ ಮುಂದೆ ಎಲ್ಲರೂ

ಗುಂಪಾಗಿ ಬರುತ್ತಾರೆ. ಅವರನ್ನು ವಿವಿಧ ಗುಂಪುಗಳನ್ನಾಗಿ ಮಾಡಿ ಬೇರೆ ಬೇರೆಯವರ ಹೊಲಗಳಿಗೆ ಕಳೆ ತೆಗೆಯಲು "ಗೊಂಚಿಗಾರರು" ಕಳುಹಿಸುವ ಪದ್ಧತಿ ಇದೆ. ಆತನ ಮಾತನ್ನು ಚಾಚು ತಪ್ಪದೇ ಪಾಲಿಸುತ್ತಾರೆ. ಕಾರಣ ಹಬ್ಬ-ಹರಿದಿನಗಳಲ್ಲಿ ಸಾಲವನ್ನು ಆ ವ್ಯಕ್ತಿ ನೀಡುತ್ತಾನೆ. ಗೊಂಚಿಗಾರರ ಹೆಸರನ್ನು ಈ ಕೆಳಗಿನಂತೆ ನೋಡಬಹುದು. ಪೆನ್ನಯ್ಯ, ಮಾರೆಕ್ಕ, ಬೋರಯ್ಯ ಹೀಗೆ ಕಮಲಾಪುರದ ಬೇಡ ಮಹಿಳೆಯರಿಗೆ ಆರ್ಥಿಕವಾಗಿ ನೆರವಾಗಿದ್ದಾರೆ.

**ಕೃಷಿ ಕೂಲಿ**

ಆರ್ಥಿಕ ಚಟುವಟಿಕೆಗಳು ವ್ಯಕ್ತಿಯ ಅಥವಾ ಸಮುದಾಯದ ಸ್ಥಾನಮಾನವನ್ನು ನಿರ್ಧರಿಸುತ್ತದೆ. ಕೂಲಿ ಎಂದರೆ ಬೇರೆಯವರ ಜಮೀನಿನಲ್ಲಿ, ಹೊಲಗದ್ದೆಗಳಲ್ಲಿ ಗೊತ್ತುಪಡಿಸಿದ ಕೆಲಸಕ್ಕಾಗಿ ಸಂಬಳದ ರೂಪದಲ್ಲಿ ಹಣ ಇಲ್ಲದೆ ಧಾನ್ಯಗಳನ್ನು ಪರ್ಯಾಯವಾಗಿ ಪಡೆಯುವುದು. ಕಮಲಾಪುರದಲ್ಲಿ ಹೆಚ್ಚಾಗಿ ಮಹಿಳೆಯರು ಪುರುಷರಿಗಿಂತ ಹೆಚ್ಚಾಗಿ ಕೂಲಿ ಮಾಡುವುದು ಕಂಡುಬಂದಿದೆ. ಶ್ರಮಕ್ಕೆ ಪಡೆಯುವ ಪ್ರತಿಫಲವು ಕೂಲಿಯಾಗಿದ್ದು, ಇದು ಅವರ ಆರ್ಥಿಕ ಸ್ಥಿತಿಯ ಜೊತೆಗೆ ಸಾಮಾಜಿಕ ಜೀವನ ವಿಧಾನವನ್ನು ಸಹ ತೋರಿಸುತ್ತದೆ. ಕೃಷಿ ಕೂಲಿ ಮಾಡಲು, ಕಮಲಾಪುರದ ಮೇಲ್ಜಾತಿಯವರ, ಶ್ರೀಮಂತರ ಹೊಲಗಳಿಗೆ ಹೋಗುತ್ತಾರೆ. ಕಮಲಾಪುರದಲ್ಲಿ ವರ್ಷಪೂರ್ತಿ ಕೆಲಸಕ್ಕೆ ಮಹಿಳೆಯರು ಹೋಗುತ್ತಾರೆ. ಕಾರಣ, ಮೇಲ್ಜಾತಿಯರ ಹೊಲ-ಗದ್ದೆಗಳಲ್ಲಿ ಹೆಚ್ಚಾಗಿ ನೀರಾವರಿ ಸೌಲಭ್ಯ ಇರುವುದರಿಂದ ವರ್ಷಪೂರ್ತಿ ಕೆಲಸ ದೊರೆಯುತ್ತದೆ. ಇವರ ಗದ್ದೆಗಳಲ್ಲಿ ಮಹಿಳೆಯರು ಕಳೆ ತೆಗೆಯುವುದು, ಕಬ್ಬು ಕಡಿಯುವುದು, ಗದ್ದೆ ಸ್ವಚ್ಛಗೊಳಿಸುವುದು, ಸಸಿ ನಡುವುದನ್ನು ಮಾಡುತ್ತಾರೆ. ಕೃಷಿ ಕೂಲಿ ಸಾಮಾನ್ಯವಾಗಿ ಮಳೆಗಾಲ ಕಳೆದು ಚಳಿಗಾಲ ಪ್ರಾರಂಭವಾಗುತ್ತಿದ್ದಂತೆ ಸಸಿ ನಾಟಿ ಪ್ರಾರಂಭವಾಗುತ್ತದೆ.

ಕಮಲಾಪುರದ ಬೇಡ ಮಹಿಳೆಯರ ಉತ್ಪಾದನಾ ಮಾರ್ಗವಾಗಿ ಕುಟುಂಬದ ಅಭಿವೃದ್ಧಿಗೆ ದಿನಕ್ಕೆ ೨ ಬಾರಿ ಕೃಷಿಕೂಲಿಗೆ ಹೋಗುತ್ತಾರೆ. ಕಾರಣ ಹಣ ಹೆಚ್ಚು ಬರುತ್ತದೆ ಎಂದು. ಬೆಳಗಿನ ಜಾವ ೪.೩೦ಕ್ಕೆ ಪ್ರಾರಂಭವಾಗಿ ೧.೩೦ರ ವರೆಗೆ ಕಬ್ಬು ಕಡಿದು ಬಂದ ನಂತರ ಮನೆಯಲ್ಲಿ ಸ್ವಲ್ಪ ವಿಶ್ರಾಂತಿ ಪಡೆದು ಊಟ ಮಾಡಿ ಮತ್ತೆ ೨.೩೦ ರಿಂದ ೪ರ ವರೆಗೆ ಕಬ್ಬು ಕಡಿಯಲು ಹೋಗುವ ಸಂಪ್ರದಾಯ ಜೀವಂತವಾಗಿದ್ದು, ಅಧ್ಯಯನದ ಸಂದರ್ಭದಲ್ಲಿ ಈ ಮಾಹಿತಿಯನ್ನು ಕಲೆ ಹಾಕಲಾಗಿದೆ. ಸಾಮಾನ್ಯವಾಗಿ ಇವರಿಗೆ ದಿನಕ್ಕೆ ೩೦೦ರೂಗಳು ಸಿಗುತ್ತವೆ.

ವಾರದ ಏಳು ದಿನಗಳಲ್ಲಿ ಇವರು ನಿರಂತರವಾಗಿ ಕೂಲಿ ಮಾಡುತ್ತಾರೆ. ಮನೆಯಲ್ಲಿ ಒಂದು ದಿನ ವಿಶ್ರಾಂತಿ ತೆಗೆದುಕೊಂಡರೆ ಸಂಜೆ ಊಟದ ಗತಿ ಏನು? ಮಕ್ಕಳ ಶಿಕ್ಷಣದ ಗತಿ ಏನು? ಅಂಗಡಿಯಲ್ಲಿಯ ಸಾಲ ತೀರಿಸಬೇಕು, ಚೀಟಿಗೆ ದುಡ್ಡು ಕಟ್ಟಬೇಕು, ಎಂಬ ಹಲವಾರು ವಿಚಾರಗಳನ್ನು ಬೇಡ ಮಹಿಳೆಯರು ಯೋಚಿಸುವಂತಹ ಗುಣವನ್ನು ಸಂದರ್ಶನದ

ಸಂದರ್ಭದಲ್ಲಿ ನಾನು ಕಂಡುಕೊಂಡಿದ್ದೇನೆ. ಪುರುಷನಿಗಿಂತ ಹೆಚ್ಚು ಕೆಲಸ ಮಾಡಿದರೂ ಇಲ್ಲಿಯ ಮಹಿಳೆಯರು ಇನ್ನು ಅತಂತ್ರ ಸ್ಥಿತಿಯಲ್ಲಿಯೇ ಇದ್ದಾರೆ. ಕೆಲ ಮಹಿಳೆಯರಿಗೆ ಇನ್ನು ಸರಕಾರ ನೀಡುವ ಪಡಿತರ ಚೀಟಿ ಸಿಕ್ಕಿಲ್ಲ. ಅಂಗಡಿಯಲ್ಲಿ ಸಿಗುವ ಅಕ್ಕಿ ನುಚ್ಚನ್ನು ತಿನ್ನುತ್ತಿದ್ದಾರೆ. ಸರ್ಕಾರದ ಸೌಲಭ್ಯಗಳು ಇವರಿಗೆ ಸರಿಯಾಗಿ ತಲುಪದೇ ಇರುವುದು ಇದಕ್ಕೆ ಮುಖ್ಯ ಕಾರಣವಾಗಿದೆ. ಮುಖ್ಯವಾಗಿ ಶ್ರೀಮಂತರಿಂದ ಪಡೆದ ಸಾಲವು ಮಹಿಳೆಯರಿಗೆ ಶಾಪವಾಗಿದ್ದು ವಿಶ್ರಾಂತಿ ಇಲ್ಲದ ದುಡಿಮೆಗೆ ಕಾರಣವಾಗಿದೆ. ಕೃಷಿ ಕೂಲಿಯು ಸಹ ಋತುಮಾನಗಳಿಗನುಸಾರವಾಗಿ ಬದಲಾಗುತ್ತದೆ. ಕೃಷಿಗೆ ಸಂಬಂಧಿಸಿದ ಕೂಲಿಯನ್ನು ಮಹಿಳೆಯ ನಾಟಿ ಸಮಯದಿಂದ ಹಿಡಿದು ಬೆಳೆಯ ಕೊಯ್ಲು ಬರುವವರೆಗೂ ಮಾಡುತ್ತಿರುವುದು ಕಂಡುಬರುತ್ತದೆ.

**ಬೀಜ ಬಿತ್ತುವುದು**

ಮಳೆಗಾಲ ಪ್ರಾರಂಭವಾಗುವುದಕ್ಕಿಂತ ಮುಂಚೆ ಬೀಜಗಳನ್ನು ಸಂಗ್ರಹಿಸಿ ಮಳೆ ಬಂದ ಸಮಯದಲ್ಲಿ ಬಿತ್ತನೆ ಕಾರ್ಯ ಮಾಡುತ್ತಾರೆ. ಜೊತೆಗೆ ಹಿಂದಿನ ವರ್ಷದ ಕೆಲವೊಂದು ತರಕಾರಿ ಬೀಜಗಳನ್ನು ಬಟ್ಟೆಯಲ್ಲಿ ಕಟ್ಟಿಟ್ಟು ಬೀಜಗಳನ್ನು ಬಿಚ್ಚು ಬಿತ್ತುವ ಸಂದರ್ಭದಲ್ಲಿ ಅವುಗಳನ್ನು ಸಾಲುಗಳಲ್ಲಿ ಹಾಕುತ್ತಾರೆ. ಉದಾ: ಕುಂಬಳಕಾಯಿ ಅವರೆಕಾಳು, ತುಪ್ಪಹೀರೇಕಾಯಿ, ಸೌತೆಕಾಯಿ ಬೀಜಗಳು. ಪುರುಷರು ಕೇವಲ ಹೊಲವನ್ನು ಹೂಳುವುದನ್ನು ಮಾತ್ರ ಮಾಡುತ್ತಾರೆ.

**ಬತ್ತ ಕೊಯ್ಯುವುದು**

ಕಮಲಾಪುರದಲ್ಲಿ ಹೆಚ್ಚಾಗಿ ನೀರಾವರಿ ಇರುವುದರಿಂದಾಗಿ ಹೆಚ್ಚು ಬತ್ತ ಬೆಳೆಯುತ್ತಾರೆ. ಇಲ್ಲಿ ಹೆಚ್ಚಾಗಿ ಮಹಿಳೆಯರು ಸಸಿಯನ್ನು ಕೆಸರ ಗದ್ದೆಯಲ್ಲಿ ಸಸಿ ನೆಡುವುದನ್ನು ಮಾಡುತ್ತಾರೆ. ಇದು ತುಂಬಾ ಕಷ್ಟದ ಕೆಲಸ. ಏಕೆಂದರೆ ತುಂಬಿದ ನೀರು, ಕೆಸರ ಗದ್ದೆಯಲ್ಲಿ ಇಳಿದು ಮಹಿಳೆಯರು ಕಚ್ಚೆಯನ್ನು ಕಟ್ಟಿಕೊಂಡು ಕಾಲುಗಳನ್ನು ಕೆಸರಿನಿಂದ ಕಿತ್ತುತ್ತ ಸಸಿ ನಾಟಿ ಮಾಡುತ್ತಾರೆ.

ಭತ್ತದ ಫಸಲು ಬಂದ ನಂತರ ಅದನ್ನು ಕೊಯ್ಯುವುದಕ್ಕೆ ದಿನಗೂಲಿಯ ರೂಪದಲ್ಲಿ ಕಾರ್ಯನಿರ್ವಹಿಸುತ್ತಿರುವುದನ್ನು ಕಾಣಬಹುದು. ಬತ್ತ ಕೊಯ್ಯುವ, ಬತ್ತದ ತೆನೆಯ ಹೊರೆಗಳನ್ನು ಹೊರುವ ಕಾರ್ಯದಲ್ಲಿ ಮಹಿಳೆಯರು ಪ್ರಮುಖ ಪಾತ್ರವಹಿಸುತ್ತಿದ್ದಾರೆ ಎಂದು ಹೇಳಬಹುದು.

**ರವದಿ ಆರಿಸುವುದು**

ಹೊಲ ಉಳುಮೆ ಆದ ನಂತರ ಹೊಲವನ್ನು ಸ್ವಚ್ಛ ಮಾಡಿ ಅಲ್ಲಿರುವ ರವದಿಯನ್ನು ಹಾರಿಸಿ ಹೊಲವನ್ನು ಸ್ವಚ್ಛಗೊಳಿಸುವ ಕಾರ್ಯ ಮಾಡುತ್ತಾರೆ.

### ಕೃಷಿಕೂಲಿ ಕೆಲಸ ಮಾಡುವ ಮಹಿಳೆಯರ ಕೋಷ್ಠಕ

| ಕ್ರ.ಸಂ. | ಕೇರಿಯ ಹೆಸರು | ಸಂದರ್ಶಿತ ಕುಟುಂಬ | ಕೃಷಿಕೂಲಿ | ಪ್ರತಿಶತ |
|---|---|---|---|---|
| ೦೧ | ತಿಮ್ಮನಾಥಕೇರಿ | ೪೦ | ೧೫ | ೫.೩೭ |
| ೦೨ | ಚೌಡಿಕೇರಿ | ೪೦ | ೨೨ | ೭.೮೫ |
| ೦೩ | ಬಂಡೆಕೇರಿ | ೪೦ | ೩೩ | ೧೧.೭೮ |
| ೦೪ | ಹಿರೇಕೇರಿ | ೪೦ | ೨೫ | ೮.೯೨ |
| ೦೫ | ಗೋನಾಳಕೇರಿ | ೪೦ | ೩೦ | ೧೦.೭೧ |
| ೦೬ | ಮನ್ಮಥಕೇರಿ | ೪೦ | ೨೪ | ೮.೫೭ |
| ೦೭ | ತಳವಾರಕೇರಿ | ೪೦ | ೦೯ | ೨.೧೪ |




### ೩.೩. ಕೃಷಿಯೇತರ ಕೂಲಿ

ಕೃಷಿಯನ್ನು ಹೊರತುಪಡಿಸಿ ಇನ್ನೂ ಹಲವಾರು ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ, ಅವುಗಳನ್ನು ನೋಡುವುದಾದರೆ ಗಾರೆ ಕೆಲಸ, ಚಿಕ್ಕ-ಪುಟ್ಟ ಕಾರ್ಖಾನೆಗಳಲ್ಲಿ, ಮನೆಗೆಲಸ, ರಾಟೆ ಹೊಲೆಯುವುದು, ಲೆಗ್‌ಮ್ಯಾಟ್‌ಗಳನ್ನು ಮಾಡುವ ಕೆಲಸವನ್ನು ಮಹಿಳೆಯರು ಮಾಡುತ್ತಿದ್ದಾರೆ.

**ಗಾರೆ ಕೆಲಸ**

ಇತ್ತೀಚಿಗೆ ಕೆಲವು ವರ್ಷಗಳಿಂದ ಬೇಡ ಮಹಿಳೆಯರು ಗಾರೆ ಕೆಲಸಕ್ಕೆ ಹೋಗುತ್ತಿದ್ದಾರೆ. ಕಾರಣ ಕೂಲಿ ಹೆಚ್ಚು ಬರುತ್ತದೆ ಎಂದು ಸಂದರ್ಶನದ ಸಮಯದಲ್ಲಿ ಗುರುತಿಸಲಾಗಿದೆ. ಇವರು

ಗಾರೆ ಕೆಲಸ ಮಾಡುವ ಸಂದರ್ಭದಲ್ಲಿ ಉಸುಕು ಮತ್ತು ಮತ್ತು ಪುಟ್ಟಿಯನ್ನು ಎತ್ತಿ ಬೇಲ್ದಾರರಿಗೆ ಕೊಡುತ್ತಾರೆ. ಇತರೆ ಕೆಲಸಗಳನ್ನು ಈ ಸಂದರ್ಭದಲ್ಲಿ ಮಾಡುತ್ತಾರೆ. ಆದರೆ ಇಲ್ಲಿ ಮಹಿಳೆಗೆ ಪುರುಷನಿಗಿಂತ ಮಹಿಳೆಯರಿಗೆ ಕೂಲಿ ಕಡಿಮೆ.

ಪುರುಷನಿಗೆ ಒಂದು ದಿನಕ್ಕೆ ರೂ.೫೦೦ ರಿಂದ ೭೦೦ ಇದ್ದರೆ ಮಹಿಳೆಯರಿಗೆ ದಿನಕ್ಕೆ ರೂ.೨೦೦ ರಿಂದ ೨೫೦ ಮಾತ್ರ ದೊರೆಯುತ್ತದೆ. ಜೊತೆಗೆ ಬೇಲ್ದಾರನಿಗೆ ಮನೆಯ ಮಾಲೀಕನಾದವನಿಗೆ ಅವನಿಗೆ ಹೊಸ ವಸ್ತ್ರ ಮತ್ತು ಉಡುಗೊರೆಯನ್ನು ನೀಡುತ್ತಾನೆ. ಆದರೆ ಮಹಿಳೆಯರಿಗೆ ನೀಡುವುದಿಲ್ಲ. ಕಮಲಾಪುರದ ಏಳು ಕೇರಿಗಳಲ್ಲಿ ಅಧ್ಯಯನ ನಡೆಸಿದಾಗ ಹಿರೇಕೇರಿ ಮತ್ತು ಬಂಡೆಕೇರಿಯ ಹೆಚ್ಚು ಜನರು ಈ ಕೆಲಸದಲ್ಲಿ ತೊಡಗಿರುವುದು ಕಂಡುಬರುತ್ತದೆ.

ಕಾರ್ಖಾನೆಗಳಲ್ಲಿ ಇತ್ತೀಚಿಗೆ ಕೆಲಸಕ್ಕೆ ಹೋಗುವುದನ್ನು ನೋಡಬಹುದಾಗಿದೆ. ಕಮಲಾಪುರದಿಂದ ಕೇವಲ ೧೦ ಕಿ.ಮೀ. ದೂರದಲ್ಲಿರುವ ಹೊಸಪೇಟೆಯಲ್ಲಿರುವ ಬಿಸ್ಕತ್ ಫ್ಯಾಕ್ಟರಿಗೆ ಕೆಲಸಕ್ಕಾಗಿ ಮಹಿಳೆಯರು ಹೋಗುತ್ತಿದ್ದಾರೆ. ಬೆಳಗಿನ ಜಾವ ಎಲ್ಲ ಮಹಿಳೆಯರು ಒಂದು ಕಡೆ ಸೇರಿ ಆಟೋದಲ್ಲಿ ಫ್ಯಾಕ್ಟರಿಗೆ ಹೋಗಿ ಕೆಲಸ ಮಾಡುತ್ತಾರೆ. ಜೊತೆಗೆ ಇತರ ಮಹಿಳೆಯರು ಮೆಡಿಕಲ್ ಶಾಪ್, ಕಂಪ್ಯೂಟರ್ ಸೆಂಟರ್‌ಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.

**ಕೃಷಿಯನ್ನು ಹೊರತುಪಡಿಸಿ ಕೆಲಸ ಮಾಡುವ ಪ್ರತಿಶತ ಮಹಿಳೆಯರ ಪಟ್ಟಿ**

| ಕ್ರಸಂ. | ಕೇರಿಯ ಹೆಸರು | ಸಂದರ್ಶಿತ ಕುಟುಂಬಗಳ ಸಂಖ್ಯೆ | ಕೃಷಿಯೇತರ ಕೆಲಸ ಮಾಡುವ ಮಹಿಳೆ | ಪ್ರತಿಶತ |
|---|---|---|---|---|
| ೧ | ತಿಮ್ಮನಾಥಕೇರಿ | ೪೦ | ೦೬ | ೨.೧೪ |
| ೨ | ಚೌಡಿಕೇರಿ | ೪೦ | ೧೨ | ೪.೨೮ |
| ೩ | ಬಂಡೆಕೇರಿ | ೪೦ | ೩೦ | ೧೦.೭೧ |
| ೪ | ಹಿರೇಕೇರಿ | ೪೦ | ೧೯ | ೬.೭೮ |
| ೫ | ಗೋನಾಳಕೇರಿ | ೪೦ | ೨೨ | ೭.೮೫ |
| ೬ | ಮನ್ಮಥಕೇರಿ | ೪೦ | ೧೫ | ೫.೩೫ |
| ೭ | ತಳವಾರಕೇರಿ | ೪೦ | ೦೫ | ೧.೭೮ |
| | | ಒಟ್ಟು ೨೮೦ | | |




ಕಮಲಾಪುರದ ಬೇಡ ಮಹಿಳೆಯರಲ್ಲಿ ಪ್ರಮುಖ ವೃತ್ತಿ ಅದು ಕೃಷಿಕೂಲಿ. ಪ್ರತಿದಿನ ಬೆಳಿಗ್ಗೆ ಕೆರೆಯ ಏರಿಯ ಮೇಲೆ ಹಳ್ಳಿಕೆರೆಯ ಮಹಿಳೆಯರು ಕೃಷಿಕೂಲಿ ಕೆಲಸಕ್ಕೆ ಹೋಗುವ ಚಿತ್ರಣ ಕಂಡುಬರುತ್ತದೆ. ಅವರನ್ನು ಕಮಲಾಪುರದ ಬಂಡೆಕೇರಿಯ ಮಹಿಳೆಯರು ಎಂದು ಗುರುತಿಸಬಹುದು. ಈ ಕೇರಿಯ ಮಹಿಳೆಯರು ವಾರ ಪೂರ್ತಿ ಕೆಲಸಕ್ಕೆ ಹೋಗುತ್ತಿದ್ದರೂ ಆರ್ಥಿಕವಾಗಿ ಇನ್ನೂ ಅಭಿವೃದ್ಧಿಯಾಗದೆ ಕೇವಲ ದುಡಿದು ತಿನ್ನುವಂತಹ ಪರಿಸ್ಥಿತಿ ಇದೆ. ಅತಿ ಕಡಿಮೆ ಕೃಷಿಕೂಲಿಗೆ ಹೋಗುವ ಮಹಿಳೆಯರೆಂದರೆ ತಿಮ್ಮನಾಥಕೇರಿ ಮಹಿಳೆಯರು. ಇವರು ಸ್ವಲ್ಪ ಮಟ್ಟಿಗೆ ಮನೆಗೆಲಸ ಮಾಡಿ ಟಿ.ವಿ., ಮೊಬೈಲ್‌ಗಳ ಬಳಕೆಯಿಂದ ಕಾಲಕಳೆಯುತ್ತ ಜೀವನ ನಡೆಸುತ್ತಿದ್ದಾರೆ. ಅವರ ಮಕ್ಕಳು ದುಡಿದು ಅಡುಗೆ ಮಾಡುವುದೇ ಇವರ ಕೆಲಸವಾಗಿದ್ದು ಇವರ ಮಕ್ಕಳು ಶಿಕ್ಷಣಕ್ಕೆ ಮುಕ್ತಾಯ ಹಾಡಿದ್ದಾರೆ.

### ೩.೪. ವ್ಯಾಪಾರ ಮತ್ತು ಮಹಿಳೆ

ಕಮಲಾಪುರದ ಬೇಡ ಮಹಿಳೆಯರ ತರಕಾರಿ ಮಾರುವ ವೃತ್ತಿಯನ್ನು ಇತ್ತೀಚಿಗೆ ಬೆಳೆಸಿಕೊಂಡಿದ್ದಾರೆ. "ವಿಜಯನಗರ ಸಾಮ್ರಾಜ್ಯದ ಎರಡನೆಯ ಹರಿಹರನ ಕಾಲದಿಂದಲೂ ತರಕಾರಿ ಮತ್ತು ದಿನಸಿ ವ್ಯಾಪಾರಕ್ಕೆ ವಾರದ ಸಂತೆಗಳು ಪ್ರಸಿದ್ಧಿಪಡೆದಿವೆ. ಪ್ರಸ್ತುತದಲ್ಲಿ ಬೇಡ ಮಹಿಳೆಯರು ತರಕಾರಿ ಮಾರುವ ಕೆಲಸ ಕಡಿಮೆಯಾಗಿದೆ. ಚಾರಿತ್ರಿಕವಾಗಿ ತರಕಾರಿ ಮಾರುವ ಕೆಲಸ ನೋಡಿದಾಗ ಏರುತ್ತಿರುವ ಜನಸಂಖ್ಯೆಗೆ ಪೂರಕವಾಗಿ ವಾರದ ಸಂತೆಗಳು ಕೇವಲ ಸಾಂಕೇತಿಕವಾಗಿದ್ದು ನಗರದಲ್ಲಿ ಪ್ರತಿನಿತ್ಯವೂ ತರಕಾರಿ ವ್ಯಾಪಾರ ನಡೆಯುತ್ತಿತ್ತು. ತಾಲೂಕಿನ ಕೆಲವೊಂದು ಪಟ್ಟಣಗಳಲ್ಲಿ ಇಂದಿಗೂ ವಾರದ ಸಂತೆಗಳು ನಡೆಯುತ್ತಿವೆ. ಕಮಲಾಪುರದ ಪಟ್ಟಣದಲ್ಲಿ ಪ್ರತಿ ಸೋಮವಾರ ಸಂತೆ ನಡೆಯುತ್ತಿರುವುದು. ಇದಕ್ಕೆ ಸಾಕ್ಷಿಯಾಗಿದೆ ಎಂದು

ಹೇಳಬಹುದಾಗಿದೆ. ಇತ್ತೀಚಿನ ಕೆಲವು ಮಹಿಳೆಯರು ಸಹ ಕಮಲಾಪುರದ ಸಂತೆಯಲ್ಲಿ ತರಕಾರಿಗಳನ್ನು ಮುಂದೆ ಹಾಕಿಕೊಂಡು ಮಾರುವುದನ್ನು ನೋಡಬಹುದಾಗಿದೆ".[೨]

ಟೊಮ್ಯಾಟೊ, ಮೂಲಂಗಿ, ಹಾಗಲಕಾಯಿ, ನುಗ್ಗೆಕಾಯಿ, ಹಸಿಮೆಣಸಿನಕಾಯಿ, ಸೌತೆಕಾಯಿ ಮುಂತಾದ ತರಕಾರಿಗಳನ್ನು ಮಹಿಳೆಯರು ಮಾರುತ್ತಿರುವುದು ಕಂಡುಬರುತ್ತದೆ.

ಇಲ್ಲಿಯ ಮಹಿಳೆಯರಿಗೆ ಹೆಚ್ಚಾಗಿ ಭಾನುವಾರ ಹೆಚ್ಚಿನ ಕೆಲಸ ಇರುತ್ತದೆ. ಅದಕ್ಕೆ ಕಾರಣ ಸೋಮವಾರದ ಸಂತೆ ಹೀಗಾಗಿ ಇವರು ಬೆಳಗಿನ ಜಾವ ೫.೩೦ಗಂಟೆಗೆ ಹತ್ತಿರದ ಹೊಸಪೇಟೆಯ ಎ.ಪಿ.ಎಂ.ಸಿ. ಮಾರುಕಟ್ಟೆಗೆ ಭೇಟಿ ನೀಡಿ ತರಕಾರಿಗಳನ್ನು ತೆಗೆದುಕೊಂಡು ಬರುತ್ತಾರೆ. ಕಾರಣ ಇವರಿಗೆ ಲಾಭ ಹೆಚ್ಚು ಬರುತ್ತದೆ. ಲಾಭದ ದೃಷ್ಟಿಯಿಂದ ಪ್ರತಿ ತರಕಾರಿಗೂ ಚೌಕಾಸಿ ಮಾಡಿ ಕಮಲಾಪುರಕ್ಕೆ ತಂದು ಮಾರಾಟ ಮಾಡುತ್ತಾರೆ. ಆದರೆ ಕೆಲವೊಂದು ಬಾರಿ ಲಾಭ ಆಗಲಾರದೆ ನಷ್ಟವು ಉಂಟಾಗುತ್ತದೆ. ಕಾರಣ ವಸ್ತುವಿಗೆ ಬೇಡಿಕೆ ಕಡಿಮೆಯಿದ್ದಾಗ ಇಂತಹ ಪರಿಣಾಮ ಬೀರುವುದು.

**ತರಕಾರಿ ಮಾರುವ ವಿಧಾನಗಳು**

**ಬಂಡಿಯಲ್ಲಿ ಮಾರುವ ಮಹಿಳೆಯರು**

ವಾರದ ಪೂರ್ತಿ ಮಹಿಳೆಯರಿಗೆ ಇದೇ ಆದಾಯದ ಮೂಲವಾದ್ದರಿಂದ ಕೆಲವೊಂದು ಬಂಡಿಯನ್ನು ಬಾಡಿಗೆಗೆ ಪಡೆದು ಅದರಲ್ಲಿ ವಿವಿಧ ರೀತಿಯ ತರಕಾರಿಗಳನ್ನು ಹಾಕಿಕೊಂಡು ಮಾರಾಟ ಮಾಡುತ್ತಾರೆ. ಮನೆ ಮನೆಗೆ ಹೋಗಿ ಮಾರಾಟ ಮಾಡುತ್ತಾರೆ. ಕಮಲಾಪುರದಲ್ಲಿ ಬಂಡಿಯಲ್ಲಿ ಬೇಡ ಸಮುದಾಯದವರು ಹೆಚ್ಚಾಗಿ ಮಾರಾಟ ಮಾಡುವುದು ಕಡಿಮೆ. ಸಂದರ್ಶನದ ಸಮಯದಲ್ಲಿ ದೊರೆತ ಮಾಹಿತಿ ಆಧಾರದ ಮೇಲೆ ಬಂಡಿಯಲ್ಲಿ ಬೇರೆ ಸಮುದಾಯದವರು ಹೆಚ್ಚಾಗಿ ಮಾರಾಟ ಮಾಡುತ್ತಾರೆ. ಬೇಡ ಮಹಿಳೆಯರು ಹೆಚ್ಚಾಗಿ ಮನೆಯಲ್ಲಿ ಮಾರಾಟ ಮಾಡುತ್ತಾರೆ.

**ಮನೆಯಲ್ಲಿ ಮಾರುವುದು**

ಬೇಡ ಮಹಿಳೆಯರು ಮನೆಯಲ್ಲಿ ತರಕಾರಿ ಮಾರುವುದನ್ನು ಸಂದರ್ಶನದ ಸಮಯದಲ್ಲಿ ಗುರುತಿಸಲಾಗಿದೆ. ಮನೆಗೆಲಸದ ಜೊತೆಗೆ ತರಕಾರಿಗಳನ್ನು ಮನೆಯಲ್ಲಿಯೆ ಮಾರುತ್ತಾರೆ. ಅದರಲ್ಲಿ ಹೆಚ್ಚಾಗಿ, ಸೊಪ್ಪು, ಕೊತ್ತಂಬರಿ, ಪಲ್ಲೆ ಹೀಗೆ ವಿವಿಧ ರೀತಿಯ ಕಡಿಮೆ ದರದಲ್ಲಿ ಸಿಗುವ ಕೆಲವೊಂದು ತರಕಾರಿಗಳನ್ನು ಮಾರುತ್ತಾರೆ. ಮನೆಗೆಲಸದ ಜೊತೆಗೆ ಆದಾಯದ ಉದ್ದೇಶದಿಂದ ಈ ಕಾರ್ಯವನ್ನು ಮಹಿಳೆಯರು ಮಾಡುತ್ತಾರೆ. ಹೆಚ್ಚಿಗೆ ಬಂಡವಾಳವಿಲ್ಲದೆ ವ್ಯಾಪಾರ ಮಾಡುವ ಸ್ವಭಾವದ ಗುಣ ಅವರಲ್ಲಿದೆ. ಕಾರಣ ಹೆಚ್ಚಿನ ಬಂಡವಾಳ ಹೂಡಿ ತರಕಾರಿ ತಂದರೆ ಅವು ಕೆಟ್ಟುಹೋದರೆ ನಷ್ಟ ಉಂಟಾಗುತ್ತದೆ ಎಂದು ಇಲ್ಲಿ ಅಭಿಪ್ರಾಯಿಸಲಾಗಿದೆ.

**ಸಂತೆಯಲ್ಲಿ ಮಾರುವುದು**

ಮೊದಲಿನಿಂದಲೂ ವಸ್ತು ವಿನಿಮಯ ಪದ್ಧತಿ ಇತ್ತು. ಈಗಲೂ ಮನೆಯಲ್ಲಿ ಏನಾದರೂ ತರಕಾರಿ ಇಲ್ಲವಾದರೆ ಪಕ್ಕದ ಮನೆಗೆ ಹೋಗಿ ತರಕಾರಿ ತೆಗೆದುಕೊಂಡು ಬಂದು ನಂತರ ಅದಕ್ಕೆ ಪ್ರತಿಯಾಗಿ ಬೇರೆ ವಸ್ತು ನೀಡುವುದನ್ನು ಬೇಡ ಮಹಿಳೆಯರಲ್ಲಿ ನೋಡಬಹುದಾಗಿದೆ. ಇದನ್ನು ಆರ್ಥಿಕವಾಗಿಟ್ಟುಕೊಂಡು ನೋಡುವುದಾದರೆ ಸೋಮವಾರದಂದು ಹೊಲಗಳಲ್ಲಿ ಬೆಳೆದಂತಹ ತರಕಾರಿಗಳನ್ನು ಕೊಯ್ದು ಅವುಗಳನ್ನು ಒಂದು ಕಡೆ ಪುರುಷರು ಹಾಕಿದರೆ ಅದನ್ನು ಸಂಗ್ರಹಿಸಿ ತಲೆಮೇಲೆ ಹೊತ್ತುಕೊಂಡು ಮಹಿಳೆಯರು ಸಂತೆಯಲ್ಲಿ ಮಾರುವುದನ್ನು ನೋಡಬಹುದಾಗಿದೆ. ಅದನ್ನು ಅವಳು ಮಾರಿ ಬಂದಂತಹ ಆದಾಯವನ್ನು ಪುರುಷನ ಕೈಗೆ ನೀಡುವುದು ಕಂಡುಬರುತ್ತದೆ.

ವ್ಯಾಪಾರ ಮಾಡುವುದಕ್ಕೆ ಮಹಿಳೆಯರಿಗೆ ಹಲವಾರು ಕಾರಣಗಳುಂಟು. ಇಲ್ಲಿ ಪುರುಷರು ಸಮಾಜದಲ್ಲಿನ ಕೆಟ್ಟ ಚಟಗಳಿಗೆ ಬಲಿಯಾಗಿ ದುಡಿದ ಹಣವನ್ನೆಲ್ಲಾ ಹಾಳು ಮಾಡುತ್ತಿದ್ದಾರೆ. ಇದನ್ನು ಮನಗಂಡ ಮಹಿಳೆ ಮನೆಯ ಜವಾಬ್ದಾರಿಯನ್ನು ನಿರ್ವಹಿಸುವಂತಹ ಪರಿಸ್ಥಿತಿಯು ಎದುರಾಗಿರುವುದರಿಂದ ಹಾಗೂ ಮಕ್ಕಳ ಶಿಕ್ಷಣ, ಆರೋಗ್ಯದ ಕಡೆ ಆಕೆ ಗಮನ ಹರಿಸಬೇಕಾಗಿದ್ದರಿಂದ ಇಂದು ಕೃಷಿ ಭೂಮಿ ಕೈಕೊಡುತ್ತಿರುವುದರಿಂದ ಮಹಿಳೆಯರು ಅನಿವಾರ್ಯವಾಗಿ ಪರ್ಯಾಯ ಮಾರ್ಗ ಕಂಡುಕೊಳ್ಳಬೇಕಾಗಿದೆ. ಈ ಹಿನ್ನೆಲೆಯಲ್ಲಿ ಇಂದು ಸ್ತ್ರೀಯರು ಸಣ್ಣ ಪುಟ್ಟ ವ್ಯಾಪಾರ ಮಾಡುವುದನ್ನು ಗಮನಿಸಬಹುದು. ಎಲ್ಲ ಮಹಿಳೆಯರಲ್ಲಿ ಕಂಡುಬರುವ ಪ್ರಮುಖ ಅಂಶವೆಂದರೆ ಹೆಚ್ಚು ಬಂಡವಾಳ ಹಾಕಿ ವ್ಯಾಪಾರ ಮಾಡುವಂತಹ ಸೌಲಭ್ಯ ಇಲ್ಲಿನ ಮಹಿಳೆಯರಿಗೆ ಇಲ್ಲ. ಆದ್ದರಿಂದ ಸಣ್ಣ ಪ್ರಮಾಣದಲ್ಲಿ ವ್ಯಾಪಾರ ಮಾಡುವುದನ್ನು ಗಮನಿಸಬಹುದು.

"ವ್ಯಾಪಾರವು ವಿಜಯನಗರಗ ಸಾಮ್ರಾಜ್ಯದ ಅತ್ಯಂತ ಸಮೀಪದ ಅಂಶವಾಗಿದೆ. ಬಜಾರಗಳ ಮುಖ್ಯ ವ್ಯಾಪಾರ ಕೇಂದ್ರಗಳಾಗಿದ್ದರಿಂದ ಸಾಮ್ರಾಜ್ಯದಲ್ಲಿ ಹೇರಳವಾಗಿ ಉತ್ಪಾದನೆಗೊಳ್ಳುತ್ತಿದ್ದ ವಸ್ತುಗಳನ್ನು ಇಲ್ಲಿ ಮಾರಾಟ ಮಾಡಲಾಗುತ್ತಿತ್ತು. ಬೆಲೆಬಾಳುವ ಮತ್ತು ರತ್ನ, ವಜ್ರ, ಹರಳು ಮುಂತಾದವುಗಳನ್ನು ಬೀದಿಯಲ್ಲಿಟ್ಟು ಮಾರಾಟ ಮಾಡುತ್ತಿದ್ದರೆಂದು ವಿದೇಶಿ ಪ್ರವಾಸಿಗರ ವರದಿಗಳಿಂದಲೂ, ಸಮಕಾಲೀನ ಸಾಹಿತ್ಯ ಕೃತಿಗಳಿಂದಲೂ ತಿಳಿದುಬರುತ್ತದೆ. ಇಂತಹ ಅಮೂಲ್ಯ ಸರಕುಗಳನ್ನು ವಿಪುಲವಾಗಿ, ನಿರಂತರವಾಗಿ ಸಾರ್ವಜನಿಕವಾಗಿ ಮಾರಾಟ ಮಾಡುತ್ತಿದ್ದುದನ್ನು ಗಮನಿಸಿದರೆ ಅವುಗಳು ದೊರೆಯುತ್ತಿದ್ದ ಮೂಲಗಳು ಸಾಮ್ರಾಜ್ಯದಲ್ಲಿ ಸಾಕಷ್ಟು ಸಂಖ್ಯೆಯಲ್ಲಿದ್ದುವೆಂದೂ ಈ ವಸ್ತುಗಳನ್ನು ಕೊಂಡುಕೊಳ್ಳುತ್ತಿದ್ದವರ ಸಂಖ್ಯೆಯೂ ಹೆಚ್ಚಿತೆಂದೂ ಭಾವಿಸುವುದು ಆಸ್ಪದವಾಗುತ್ತದೆ.

ಆರ್ಥಿಕವಾಗಿ, ವಿಜಯನಗರ ಸಾಮ್ರಾಜ್ಯವು ಅತ್ಯುನ್ನತ ಸ್ಥಿತಿಯನ್ನು ತಲುಪಿದ್ದಿತು. ವ್ಯವಸಾಯಕ್ಕೆ ಪ್ರೋತ್ಸಾಹವಿದ್ದು, ಕೆರೆ-ಕಾಲುವೆಗಳನ್ನು ಕಟ್ಟಿಸಿದ್ದರೆಂಬುದಕ್ಕೆ ಹಂಪಿಯ ತುರ್ತುಕಾಲುವೆ ಮುಖ್ಯ ಉದಾಹರಣೆ. ವ್ಯವಸಾಯದಿಂದ ರಾಜ್ಯಕ್ಕೆ ಯಥೇಚ್ಛ ಆದಾಯವಿದ್ದಿತು. ದವಸ ಧಾನ್ಯ, ಹಣ್ಣು, ಹಂಪಲು, ಹೂ, ತರಕಾರಿ ಮುಂತಾದುದನ್ನು ಮಾರಾಟ ಮಾಡಲು ಬಜಾರುಗಳು ಸಹಾಯಕವಾಗಿದ್ದವು. ವ್ಯಾಪಾರಕ್ಕೆ ವಿಶೇಷ ಪ್ರೋತ್ಸಾಹ ನೀಡಿದ್ದರಿಂದ ಬಜಾರುಗಳು ಪ್ರಗತಿ ಹೊಂದಿದ್ದವು".[೩]

ಕಮಲಾಪುರದ ಮುಖ್ಯಬೀದಿಯಾದ ಊರಮ್ಮ ದೇವಸ್ಥಾನದ ಹಿಂದುಗಡೆ ಪ್ರತಿ ಸೋಮವಾರ ಸಂತೆ ನಡೆದರೆ ಕಿರಾಣಿ ವ್ಯಾಪಾರವು ಆಯಾ ಕೇರಿಗಳ ಅವರ ಮನೆಯ ಹತ್ತಿರ ವ್ಯಾಪಾರ ಮಾಡುತ್ತಾರೆ. ತರಕಾರಿ ವ್ಯಾಪಾರವೂ ಸಹ ದಿನನಿತ್ಯ ಅವರ ಮನೆಗಳಲ್ಲಿಯೇ ಮಾಡುವುದರ ಜೊತೆಗೆ ಪ್ರತಿ ಸೋಮವಾರ ಸಂತೆಯಲ್ಲಿಟ್ಟು ಮಾರುವುದನ್ನು ನೋಡಬಹುದಾಗಿದೆ.

**ವ್ಯಾಪಾರ ಮಾಡುವಾಗ ಮಹಿಳೆಯರು ಎದುರಿಸುವ ಸಮಸ್ಯೆಗಳು**

೧. ಆದಾಯದ ಕೊರತೆಯಿಂದಾಗಿ ಸಣ್ಣ-ಪುಟ್ಟ ವ್ಯಾಪಾರ ಮಾಡಿದರೂ ಸರಿಯಾದ ರೀತಿಯಲ್ಲಿ ಆರ್ಥಿಕವಾಗಿ ಸಫಲರಾಗುತ್ತಿಲ್ಲ.

೨. ದೊಡ್ಡ ಬಂಡವಾಳದ ಕೊರತೆಯಿಂದಾಗಿ ವ್ಯಾಪಾರದ ಪ್ರಮಾಣವು ಕಡಿಮೆಯಾಗುತ್ತಿದೆ.

೩. ಸ್ಥಳೀಯವಾಗಿ ಮಾರಾಟ ಮಾಡುವಾಗ ಜಕಾತಿಯನ್ನು ಎತ್ತುವುದರಿಂದ ಹಣವನ್ನು ನೀಡಬೇಕಾಗುತ್ತದೆ ಮತ್ತು ಜಾಗಕ್ಕೆ ಬಾಡಿಗೆ ಕಟ್ಟಬೇಕು.

೪. ಮನೆ-ಮನೆಗೆ ವ್ಯಾಪಾರ ಮಾಡುವುದರಿಂದ ಅವರ ಆರೋಗ್ಯ ಸಮಸ್ಯೆ ಎದುರಾಗುತ್ತದೆ.

೫. ದಲ್ಲಾಳಿಗಳ ಮಧ್ಯ ಪ್ರವೇಶದಿಂದಾಗಿ ಅವರ ಆದಾಯದ ಮಟ್ಟವು ಕಡಿಮೆಯಾಗಿದೆ.

**ಕಿರಾಣಿ ವ್ಯಾಪಾರ**

ಕೆಲವೊಂದು ಸರಕಾರದ ಯೋಜನೆಗಳು ಮಹಿಳೆಯರ ಅಭಿವೃದ್ಧಿ ದೃಷ್ಟಿಯಲ್ಲಿಟ್ಟುಕೊಂಡು ರಿಯಾಯಿತಿ ದರದ ಅಂಗಡಿಗಳನ್ನು ಇಟ್ಟುಕೊಡುವುದು ಅವಶ್ಯಕವಾಗಿದೆ. ಇದರಿಂದಾಗಿ ಅವರ ಅಭಿವೃದ್ಧಿಗೆ ನೆರವಾಗುತ್ತಿವೆ ಎಂದು ಹೇಳಬಹುದು. ಕಮಲಾಪುರದಲ್ಲಿ ಹೆಚ್ಚಾಗಿ ಕಿರಾಣಿ ಅಂಗಡಿಗಳಿಂದ ಮಹಿಳೆಯರಿಗೆ ಸ್ವಂತ ಜೀವನ ನಡೆಸುವುದಕ್ಕೆ ದಾರಿಯಾದರೂ ಆದಾಯದ ಪ್ರಮಾಣ ಸ್ವಲ್ಪ ಮಟ್ಟಿಗೆ ನೆರವಾಗಿದ್ದು ಬೆಳಗಿನ ಜಾವ ಮನೆಯವರಿಗೆ ಅಡುಗೆಮಾಡಿ ಪಕ್ಕದಲ್ಲಿ ಕಿರಾಣಿ ಅಂಗಡಿ ಇರುವುದರಿಂದ ಬೇಗನೆ ಅಂಗಡಿ ಬಾಗಿಲು ತೆರೆದು ವ್ಯಾಪಾರದಲ್ಲಿ ನಿರತರಾಗುತ್ತಾರೆ. ಆದರೆ ದಿನವಿಡೀ ವ್ಯಾಪಾರ ಮಾಡಿದರೂ ೧೦೦ ರಿಂದ ೧೫೦ರೂಗಳು ಇವರ ಆದಾಯ ಬರುತ್ತದೆಂದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ಕಿರಾಣಿ ಅಂಗಡಿಯ

ಜೊತೆಗೆ ಕೆಲವೊಂದು ತರಕಾರಿಗಳನ್ನು ಮಾರಾಟ ಮಾಡುತ್ತಾರೆ ಮತ್ತು ತಮ್ಮ ಆರ್ಥಿಕತೆಯ ಪ್ರಗತಿಗಾಗಿ ಪ್ರತಿದಿನ ಫಿಗ್ನಿಯನ್ನು ೧೦೦ರೂಗಳು ಕಟ್ಟುತ್ತಾರೆ. ಮುಂದೊಂದು ದಿನ ಅದು ಅವರಿಗೆ ಆರ್ಥಿಕವಾಗಿ ಸಹಾಯ ಆಗುತ್ತದೆ ಎಂದು ಕ್ಷೇತ್ರಕಾರ್ಯದ ಮೂಲಕ ಕಂಡುಕೊಳ್ಳಲಾಗಿದೆ.

**ವ್ಯಾಪಾರ ಮಾಡುವ ಮಹಿಳೆಯರನ್ನು ತೋರಿಸುವ ಕೋಷ್ಟಕ**

| ಕ್ರ.ಸಂ. | ಕೇರಿಯ ಹೆಸರು | ಸಂದರ್ಶಿತ ಕುಟುಂಬಗಳು | ತರಕಾರಿ ವ್ಯಾಪಾರ ಮಾಡುವ ಮಹಿಳೆಯರು | ಕಿರಾಣಿ ವ್ಯಾಪಾರ ಮಾಡುವ ಮಹಿಳೆಯರು | ಪ್ರತಿಶತ |
|---|---|---|---|---|---|
| ೧ | ತಿಮ್ಮನಾಥಕೇರಿ | ೪೦ | ೪ | ೧ | ೧.೭೮ |
| ೨ | ಚೌಡಿಕೇರಿ | ೪೦ | ೪ | ೨ | ೨.೧೪ |
| ೩ | ಬಂಡೆಕೇರಿ | ೪೦ | ೬ | ೩ | ೩.೨೧ |
| ೪ | ಹಿರೇಕೇರಿ | ೪೦ | ೨ | ೨ | ೧.೪೨ |
| ೫ | ಗೋನಾಳಕೇರಿ | ೪೦ | ೩ | ೧ | ೧.೪೨ |
| ೬ | ಮನ್ಮಥಕೇರಿ | ೪೦ | ೧ | ಇಲ್ಲ | ೦.೩೫ |
| ೭ | ತಳವಾರಕೇರಿ | ೪೦ | ೧ | – | ೦.೩೫ |




ಕಮಲಾಪುರದಲ್ಲಿರುವ ಬೇಡ ಮಹಿಳೆಯರ ವ್ಯಾಪಾರ ದೊಡ್ಡ ಮಟ್ಟದಲ್ಲ. ಏಕೆಂದರೆ ದೊಡ್ಡಮಟ್ಟದ ಬಂಡವಾಳವನ್ನು ಹಾಕುವ ಶಕ್ತಿಯೂ ಇಲ್ಲ. ಮನೆಯ ನಿರ್ವಹಣೆಗಾಗಿ ಅಂಗಡಿ ವ್ಯಾಪಾರ, ತರಕಾರಿ ವ್ಯಾಪಾರ ಇಂತಹ ಸಣ್ಣ ವ್ಯಾಪಾರ ಮಾಡಿದರೂ ಇವರಿಗೆ ಸರಿಯಾದ

ರೀತಿಯ ವ್ಯಾಪಾರದ ಕೌಶಲ್ಯಗಳು ಅಷ್ಟಾಗಿಲ್ಲ. ಆದ್ದರಿಂದ ದೊಡ್ಡಮಟ್ಟದ ವ್ಯಾಪಾರ ಮಾಡಲಾಗದೆ ತಮ್ಮ ಮನೆಯ ಮುಂದೆ ಅಂಗಡಿ, ತರಕಾರಿ ವ್ಯಾಪಾರ ಮಾಡುತ್ತ ರೂ.೧೦೦ ರಿಂದ ೧೫೦ ದಿನಕ್ಕೆ ದುಡಿದು ತಮ್ಮ ಮನೆಯ ನಿರ್ವಹಣೆ ಮಾಡುತ್ತಾರೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತ ಮಾಹಿತಿ ಎಂದರೆ ಬಂಡೇಕೇರಿ, ಚಾವಡಿಕೇರಿಯಲ್ಲಿನ ಮಹಿಳೆಯರು ಸ್ವಲ್ಪ ಮಟ್ಟಿಗೆ ವ್ಯಾಪಾರ ಮಾಡುವ ಧೈರ್ಯ ಮಾಡಿದ್ದಾರೆ. ಇದರಲ್ಲಿ ಸಂತೆ ಮಾರುಕಟ್ಟೆಯಲ್ಲಿ ವ್ಯಾಪಾರ ಮಾಡುವವರು ತಿಮ್ಮನಾಥಕೇರಿ ಮಹಿಳೆಯರಲ್ಲಿ ಬಂಡಿಕೇರಿ ಮಹಿಳೆಯರು ಪ್ರತಿ ಶನಿವಾರ ಮತ್ತು ಭಾನುವಾರ ಹೊಸಪೇಟೆಯ ಎ.ಪಿ.ಎಂ.ಸಿ.ಗೆ ಹೋಗಿ ತರಕಾರಿಗಳನ್ನು ತಂದು ಸೋಮುವಾರ ಸಂತೆಯಲ್ಲಿ ಮಾರಾಟ ಮಾಡುತ್ತಾರೆ.

**೩.೫. ಪಶುಪಾಲನೆ ಮತ್ತು ಮಹಿಳೆ**

ಆದಿ ಮಾನವನು ಆಹಾರಕ್ಕಾಗಿ ಪ್ರಾಣಿಗಳನ್ನು ಬೇಟೆಯಾಡಿ ತನ್ನ ಹಸಿವನ್ನು ನೀಗಿಸಿಕೊಳ್ಳುತ್ತಿದ್ದನು. ಕಾಲಾಂತರದಲ್ಲಿ ತನ್ನ ಆಹಾರ ಪದ್ಧತಿಯಲ್ಲಿ ಬದಲಾವಣೆ ಮಾಡಿಕೊಂಡನು. ಈ ಬೇಡ ಸಮುದಾಯದ ಜನರು ಬೇಟೆ ಸಂಸ್ಕೃತಿಯನ್ನು ಇತರೆ ಸಮುದಾಯಕ್ಕಿಂತ ಹೆಚ್ಚಾಗಿ ಮುಂದುವರೆಸಿಕೊಂಡು ಬಂದರು.

"ಬೇಡ ಸಮುದಾಯದವರು ಹಿಂದಿನ ಶತಮಾನಗಳಲ್ಲಿ ಕುರಿ ಸಾಕಿದ್ದುದಕ್ಕಿಂತ ವ್ಯವಸಾಯ ಮಾಡಿದ್ದಕ್ಕಿಂತ ಕೇವಲ ಪಶುಪಾಲನೆ ಹೆಚ್ಚು ಎಂಬುದು ಈಗಲೂ ಸ್ಪಷ್ಟವಾಗುವ ಸಂಗತಿ. ಬೇಡರ ಹೆಚ್ಚಾಗಿ ತೆಲುಗು ಮಾತನಾಡುವವರಾಗಿದ್ದು ಅವರ ಹೆಸರು/ಗೋತ್ರ/ಪಂಗಡದ ಹೆಸರುಗಳೆಲ್ಲವೂ ತೆಲುಗಿನಲ್ಲಿವೆ. ಸಾಮಾನ್ಯವಾಗಿ ಯಾವುದೇ ಸಮುದಾಯವು ತನ್ನ ಜೀವನ ಕ್ರಮದ ಅಭಿವ್ಯಕ್ತಿಗೆ ದ್ಯೋತಕವಾಗಿ ಹೆಸರು, ಕುಲನಾಮ, ಗೋತ್ರದ ಹೆಸರುಗಳನ್ನು ನಿರ್ದೇಶನ ಮಾಡಿಕೊಳ್ಳುವುದುಂಟು. ಕೃಷಿ ಹೇಗೆ ಜನರು ಸೇರಿ ಮಾಡುವ ವೃತ್ತಿಯಾಗಿದೆಯೋ ಅದೇ ರೀತಿ ಪಶುಪಾಲನೆ ಕೂಡ. ಪಶುಪಾಲನೆ ಎಂದರೆ ಕೇವಲ ದನಗಳ ಪಾಲನೆ ಎಂದೂ ಭಾವಿಸಬೇಕಿಲ್ಲ. ದನಗಳ ಜೊತೆಗೆ ಕುರಿ, ಮೇಕೆ, ಎಮ್ಮೆಗಳನ್ನು ಸಹ ಸಾಕುತ್ತಿದ್ದರು. ಕುಟುಂಬದಲ್ಲಿ ಪಶುಗಳ ಪಾಲನೆ ಒಬ್ಬರಾದರೆ, ಎತ್ತುಗಳ ಪಾಲನೆ ಇನ್ನೊಬ್ಬರದು. ಕರುಗಳ ಪಾಲನೆ ಮತ್ತೊಬ್ಬರದು. ಕುರಿ ಮೇಕೆಗಳ ಪಾಲನೆ ಒಬ್ಬರಾದರೆ ಅವುಗಳ ಮರಿಗಳ ಪಾಲನೆ ಮತ್ತೊಬ್ಬರದು. ಹೀಗೆ ಪಶುಪಾಲನೆ ಸಂಬಂಧಿಸಿದ ಕೆಲಸವನ್ನು ನಿರ್ವಹಿಸಲು ಒಬ್ಬೊಬ್ಬ ವ್ಯಕ್ತಿ ಮೀಸಲಾಗಿರುತ್ತಿದ್ದ. ಹೀಗೆ ಕೆಲಸವನ್ನು ಈ ಸಮುದಾಯದವರು ಹಂಚಿಕೊಳ್ಳುವ ಪದ್ಧತಿ ಇತ್ತು. ಇವರಿಗೆ ಕೃಷಿಯ ದೃಷ್ಟಿಯಲ್ಲಿಟ್ಟು ಕೊಂಡು ದನಗಳನ್ನು ಹೆಚ್ಚಾಗಿ ಮೇಯಿಸುವ ಪದ್ಧತಿ ಇದೆ. ಕೃಷಿಯ ನಿರ್ವಹಣೆಗೆ ಧನಗಳ ಸಾರಿಗೆ ಸಂಪರ್ಕ ಕಾರ್ಯವನ್ನು ನಿರ್ವಹಿಸುತ್ತೇವೆ".[೪]

ಕಮಲಾಪುರದಲ್ಲಿ ಹಬ್ಬದ ದಿನದಂದು ಎತ್ತುಗಳಿಗೆ ಗೆಜ್ಜೆ ಕಟ್ಟಿ, ಕೊಂಬುಗಳಿಗೆ ಬಣ್ಣ ಹಾಕಿ ರಿಬ್ಬನ್ ಕಟ್ಟಿ ಆ ದಿನ ಅವುಗಳನ್ನು ಕೆಲಸಕ್ಕೆ ಕರೆದುಕೊಂಡು ಹೋಗುವುದಿಲ್ಲ. ಅಂದು ಬೆಲ್ಲ ಮತ್ತು ಅನ್ನವನ್ನು ಎತ್ತುಗಳಿಗೆ ನೀಡಿ ಪೂಜೆ ಮಾಡುವ ಪದ್ಧತಿ ಇನ್ನು ಜೀವಂತವಾಗಿದೆ.

ಬೇಡ ಸಮುದಾಯದವರ ಹೆಸರುಗಳು ಆಧಾರದ ಮೇಲೆ ಅವರು ಪಶುಪಾಲನೆ ಮಾಡುತ್ತಿದ್ದರು ಎಂದು ನೋಡಲು ಸಹಾಯಕಾರಿಯಾಗುವ ಅಂಶವೇ ಅವರ ಬೆಡಗುಗಳಾಗಿವೆ.

ಎನಮಲೋರು: ಎಮ್ಮೆಕಾಯುವವರು, ತೆಲುಗಿನಲ್ಲಿ ಎನುಮ ಎಂದರೆ ಎಮ್ಮೆ ಎಂದಾರ್ಥ

ಗೊಡ್ಲಾರು: ಕುರಿ ಕಾಯುವವರು, ಗೊಡ್ಲು ಎಂದರೆ ಕುರಿಗಳು ಎಂದರ್ಥ

ಪಡ್ಲಾರು ಎಂದರೆ(ಆಕಳ ಮಣಕ ಕಾಯುವವರು) ಪಡ್ಲ ಎಂದರೆ ಮಣಕ ಎಂದರ್ಥ.

ಪೋತ್ಲಾರು ಎಂದರೆ(ಹೋತುಗಳ ಪಾಲನೆ ಮಾಡುವವರು) ಪೋತು ಎಂದರೆ ಹೋತು ಎಂದರ್ಥ.

ಹೀಗೆ ಇವರಿಗೆ ಪಶುಪಾಲನೆ ಇತ್ತು ಎಂದು ಮೇಲಿನ ಬೆಡಗುಗಳ ಮೂಲಕ ಹೆಸರು ಬಂದಿರಬಹುದು ಕ್ಷೇತ್ರಕಾರ್ಯದಲ್ಲಿ ತಿಳಿಯಲು ನೆರವಾಗಿದೆ.

ವಿವಿಧ ರೀತಿಯ ಪ್ರಾಣಿಗಳನ್ನು ಸಾಕುವ ಅಥವಾ ಪಾಲನೆ ಮಾಡುವ ಕೆಲಸಕ್ಕೆ ಪಶುಸಂಗೋಪನೆ ಎಂದು ಹೆಸರು. ಪಶುಸಂಗೋಪನೆಯು ಆರ್ಥಿಕತೆಯನ್ನು ಹೆಚ್ಚಿಸುವ ಅತಿ ಮುಖ್ಯ ಚಟುವಟಿಕೆಯಾಗಿದೆ. ಅದು ವಿಸ್ತರಿಸುತ್ತಿರುವ ಮತ್ತು ವೈವಿಧ್ಯಗೊಳ್ಳುತ್ತಿರುವ ಕೃಷಿಯ ಒಂದು ಅವಶ್ಯಕ ಭಾಗವಾಗಿದೆ. ಬೇಸಾಯ ಮತ್ತು ಕೂಲಿ ಕೆಲಸದೊಡನೆ ಪಶುಸಂಗೋಪನೆ ಯನ್ನು ಮಾಡುವುದರಿಂದ ಉದ್ಯೋಗಾವಕಾಶಗಳನ್ನು ಅವರ ಆದಾಯವನ್ನು ಮತ್ತು ಜೀವನ ಮಟ್ಟವನ್ನು ಹೆಚ್ಚಿಸಿಕೊಳ್ಳಬಹುದು. ಇದು ಕುಟುಂಬಕ್ಕೆ ಪೂರಕ ಆದಾಯವನ್ನು ಒದಗಿಸುವುದ ರಿಂದ ಸಣ್ಣ ಮತ್ತು ಅತಿಸಣ್ಣ ಬೇಡ ಮಹಿಳೆಯರಿಗೆ ಒಂದು ಉಪಯುಕ್ತ ಕಸುಬಾಗಿದೆ.

ಕರ್ನಾಟಕದಲ್ಲಿ ಕೃಷಿ ಉತ್ಪನ್ನದ ಒಟ್ಟು ಮೌಲ್ಯದಲ್ಲಿ ಸುಮಾರು ಶೇಕಡ ೨೫ರಷ್ಟು ಪಶುಸಂಗೋಪನೆಯ ವಲಯದಿಂದ ದೊರೆಯುತ್ತದೆ. ಕರ್ನಾಟಕದಲ್ಲಿರುವ ಅಗಾಧ ಪ್ರಮಾಣದ ಜಾನುವಾರ ಜನಸಂಖ್ಯೆಯು ಹಾಲು, ಮೊಟ್ಟೆ, ಮಾಂಸ, ಬೆಣ್ಣೆ ಮುಂತಾದ ವಸ್ತುಗಳಿಗಿರುವ ಬಾರೀ ಬೇಡಿಕೆಯನ್ನು ಸಮರ್ಥವಾಗಿ ಈಡೇರಿಸಲು ಸಫಲವಾಗಿದೆ.

**ಜಾನುವಾರುಗಳ ವಿಧಗಳು**

"ಜಾನುವಾರ ಮತ್ತು ಪಶುಗಳನ್ನು ೩ ವಿಧಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ

೧. ಕಾರ್ಯನಿರತ ಜಾನುವಾರುಗಳು

೨. ಹಾಲು ಕರೆಯುವ ಜಾನುವಾರುಗಳು

೩. ಕೆಲಸ ಮಾಡಲಾಗದ ಜಾನುವಾರುಗಳು

೧. ಕಾರ್ಯನಿರತ ಜಾನುವಾರ

ಎತ್ತುಗಳು, ಕೆಲಸ ಮಾಡಬಲ್ಲ ಹಸುಗಳು, ಎಮ್ಮೆಗಳು ಮತ್ತು ಕೋಣಗಳಿಗೆ ಕಾರ್ಯನಿರತ ಜಾನುವಾರುಗಳು ಎಂದು ಹೆಸರು. ಕಾರ್ಯನಿರತ ಜಾನುವಾರುಗಳಲ್ಲಿ ಹಸುಗಳ ಮತ್ತು ಎಮ್ಮೆಗಳ ಪಾಲು ಬಹಳ ಕಡಿಮೆ. ಅಂದರೆ ಸುಮಾರು ಶೇ.೩.ರಷ್ಟು ಮಾತ್ರ ಇದೆ.

೨. ಹಾಲು ಕರೆಯುವ ಜಾನುವಾರುಗಳು

ಹಾಲು ಕರೆಯಲು ಬಳಸುವ ಎಮ್ಮೆಗಳು, ಹಸುಗಳನ್ನು ಒಳಗೊಂಡಿರುತ್ತವೆ. ಅಂದರೆ ಇವು ಗರ್ಭಧರಿಸುವುದು ಮತ್ತು ಸಂತಾನವೃದ್ಧಿಗೆ ನೆರವಾಗುವ ಜಾನುವಾರ ವರ್ಗವಾಗಿರುತ್ತದೆ. ಇವು ವರ್ಷಕ್ಕೆ ಮೇಲ್ಪಟ್ಟ ವಯಸ್ಸಿನ ಜಾನುವಾರುಗಳಾಗಿರುತ್ತವೆ.

೩. ಕೆಲಸ ಮಾಡಲಾಗದ ಜಾನುವಾರಗಳು

ಈ ವರ್ಗವು ವಯಸ್ಸಾದ ಮತ್ತು ಕೃಶವಾದ ಜಾನುವಾರುಗಳನ್ನು ಒಳಗೊಂಡಿರುತ್ತವೆ. ಇವುಗಳನ್ನು ಯಾವ ಕೆಲಸಕ್ಕೂ ಉಪಯೋಗಿಸದೆ ಕೃಷಿಕರು ಸಾಕುತ್ತಿರುತ್ತಾರೆ.

**ಆರ್ಥಿಕ ಅಭಿವೃದ್ಧಿಯಲ್ಲಿ ಪಶುಗಳ ಪ್ರಾಮುಖ್ಯ**

೧. ಜಮೀನು ಸಾಗುವಳಿ ಮಾಡಲು ನೆರವಾಗುವುದು.

೨. ಸಾರಿಗೆ ಸೇವೆ ಬಂಡಿಗಳ ಮುಖಾಂತರ ಹೊಲದಿಂದ ಮನೆಗೆ ಸಂಪರ್ಕ ಸೇತುವೆಯಾಗಿರುತ್ತವೆ.

೩. ಹಾಲು ಮತ್ತು ಹಾಲಿನ ಪೂರೈಕೆಗೆ ನೆರವಾಗಿದೆ

೪. ಮಾಂಸದ ಉಪಯೋಗಕ್ಕಾಗಿ ಬೆಳೆಸಲಾಗುವುದು.

೫. ಸಗಣಿ ಗೊಬ್ಬರ ದೊರೆಯುವುದುರ ಮುಖಾಂತರ ಕೃಷಿಯ ಫಲವತ್ತತೆಯ ಪ್ರಮಾಣ ಹೆಚ್ಚಿಸುವುದು.

೬. ಚರ್ಮದ ಪೂರೈಕೆಗೆ ಸಹಾಯಾರಿಯಾಗುವುದು".[೫]

**ಕುರಿ ಸಾಕಾಣಿಕೆ**

ತಮ್ಮ ಉಪಜೀವನಕ್ಕೆ ಕಷ್ಟದ ಸಂದರ್ಭದಲ್ಲಿ ನೆರವಾಗುವುದು ಎಂದು ಪ್ರತಿಯೊಬ್ಬ ಮಹಿಳೆಯು ಮನೆಯ ಮುಂದೆ ೧ ಅಥವಾ ೨ ಕುರಿಗಳನ್ನು ಸಾಕುವುದನ್ನು ಕಮಲಾಪುರದಲ್ಲಿ ಕಾಣಬಹುದಾಗಿದೆ. ಕಮಲಾಪುರದಲ್ಲಿ ಸುಮಾರು ವರ್ಷಗಳ ಹಿಂದೆ ಹೆಚ್ಚಾಗಿ ಕುರಿ ಸಾಕುತ್ತಿದ್ದರು. ಇಂದು ಇದು ಕಡಿಮೆಯಾಗಿ ಕೇವಲ ೨-೩ ಕುರಿಗಳನ್ನು ಸಾಕುತ್ತಿದ್ದಾರೆ. ಕೃಷಿಕೂಲಿಗೆ ಹೋಗುವ ಸಂದರ್ಭದಲ್ಲಿ ಅವುಗಳನ್ನು ಹಿಡಿದುಕೊಂಡು ಹೋಗಿ ಮೇಯಿಸಿ ಬರುವಾಗ ಸ್ವಲ್ಪ ಮೇವನ್ನು ತರುತ್ತಾರೆ. ಮತ್ತು ಕೂಲಿಯನ್ನು ಪಡೆಯುತ್ತಾರೆ. ಕುರಿಯನ್ನು ಮೇಯಿಸುತ್ತಾರೆ. ಕುರಿ ಸಾಕಾಣಿಕೆಯಿಂದ ಆದಾಯ ಜಾಸ್ತಿ ಬರುತ್ತದೆ ಎಂದೂ ಕ್ಷೇತ್ರಕಾರ್ಯದಿಂದ ತಿಳಿಯುತ್ತದೆ. ಹೀಗಾಗಿ

ಕುರಿಸಾಕಾಣಿಕೆಗೆ ಮಹಿಳೆಯರು ಹೆಚ್ಚಿನ ಮಹತ್ವ ಕೊಡುತ್ತಿದ್ದಾರೆ. ಸಾಮಾನ್ಯವಾಗಿ ಕೆಲ ಮನೆಗಳಲ್ಲಿ ಮಾತ್ರ ಕುರಿಗಳಿರುವುದನ್ನು ಕಾಣುತ್ತೇವೆ. ಅತಿ ಹೆಚ್ಚಾಗಿ ಕುರಿಗಳು ಇರುವ ಒಂದು ಬೇಡ ಸಮುದಾಯದ ಕುಟುಂಬದ ೧೪ನೇ ವಾರ್ಡ್‌ನ, ತಿಮ್ಮನಾಥ ಕೇರಿಯ ಈರಪ್ಪ ಎಂಬುವವರದ್ದು. ಇತ್ತೀಚಿಗೆ ಬೇಡ ಸಮುದಾಯದಲ್ಲಿ ಪಶುಪಾಲನೆ ಸ್ವಲ್ಪ ಮಟ್ಟಿಗೆ ಕಣ್ಮರೆಯಾಗುತ್ತಿದೆ. ಇದಕ್ಕೆ ಕಾರಣವೆಂದರೆ ಬೇರೆ ಬೇರೆ ವೃತ್ತಿಯಲ್ಲಿ ತೊಡಗಿಕೊಂಡಿರುವುದು. ವರ್ಷಪೂರ್ತಿ ಕುರಿ ಕಾಯ್ದರೂ ಆದಾಯ ಕಡಿಮೆ ಬರುತ್ತದೆ. ಜೊತೆಗೆ ಮಳೆಗಾಲ ಮುಗಿದ ಮೇಲೆ ಈ ಪ್ರದೇಶದಲ್ಲಿನ ಹುಲ್ಲಿನ ಅಭಾವ ಕಾಣಿಸಿಕೊಳ್ಳಲು ಪ್ರಾರಂಭಿಸಿದಾಗ ಕುರಿಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೊಡೆದುಕೊಂಡು ಬೇರೆ ಬೇರೆ ಪ್ರದೇಶಗಳಿಗೆ ಹೋಗುವರು. ಹೊಲಗದ್ದೆಗಳಲ್ಲಿ ಬಯಲು ಪ್ರದೇಶಗಳಲ್ಲಿ ಮೇಯಿಸುವರು. ಇದರಲ್ಲಿ ಮಹಿಳೆಯರ ಪಾತ್ರ ನೋಡುವುದಾದರೆ ಮಹಿಳೆ ಕುರಿಹಟ್ಟಿ ಸ್ವಚ್ಛಮಾಡಿ “ಕುರಿಕಾಯುವ ಪುರುಷರಿಗೆ ಅಡುಗೆ ಮಾಡುವುದು ಮತ್ತು ಕುರಿಗಳು ಬಂದ ನಂತರ ಸರಗ ಸ್ವಚ್ಚಮಾಡಿ ಕುರಿಗಳ ಮೇಲೆ ಚೆಲ್ಲು, ನೈವೇದ್ಯ ನೀಡುವ ಕೆಲಸ ಮಾಡುತ್ತಾಳೆ. ಇದು ಕಮಲಾಪುರದಲ್ಲಿ ಸಂಪೂರ್ಣ ಕಡಿಮೆಯಾಗಿದೆ. ಈ ಕೆಲಸ ಈಗ ಕೇವಲ ಹಬ್ಬದಂದು, ಅದು ಯುಗಾದಿ ಅಮವಾಸ್ಯೆಯ ಮತ್ತು ದೀಪಾವಳಿ ಲಕ್ಷ್ಮಿದೇವಿಯ ದಿನದಂದು ಮಾತ್ರ ಈ ಕೆಲಸ ಮಾಡುವುದು ಮಹಿಳೆಯೇ ಎಂಬುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿಯಲಾಗಿದೆ. ಪ್ರಸ್ತುತ ಒಂದು ಕುರಿಗೆ ೮೦೦೦-೭೦೦೦ ಬೆಲೆ ಇದೆ. ನಾನು ಸಂದರ್ಶಿಸಿದ ಒಟ್ಟು ೭ ಕೇರಿಗಳಲ್ಲಿ ಬೇಡ ನಾಯಕರ ಪ್ರತಿ ಕೇರಿಯ ೪೦ ಕುಟುಂಬಗಳಲ್ಲಿ ಈ ಕುರಿ ಸಾಕಾಣಿಕೆ ಕಡಿಮೆ ಇದೆ. ಅದರಲ್ಲಿ ತಿಮ್ಮನಾಥಕೇರಿಯು ಸ್ವಲ್ಪ ಹೆಚ್ಚಾಗಿದೆ ಎಂದು ಗುರುತಿಸಲಾಗಿದೆ.

ಪಶುಪಾಲನೆ ಬೇಡ ಮಹಿಳೆಯರ ವೃತ್ತಿ ಆಗಿದ್ದರೂ ಇತ್ತೀಚಿಗೆ ಕೃಷಿಯಲ್ಲಿ ನಿರತರಾದ ನಂತರ ಪಶುಗಳನ್ನು ಸಾಕಲು ತೊಡಗಿಸಿಕೊಂಡಿದ್ದಾರೆ. ಪುರುಷರು ಕೃಷಿಯಲ್ಲಿ ಕಾರ್ಯನಿರತ ನಾದರೂ ಕುರಿಗಳನ್ನು ಮಾರುವ ಕೆಲಸ ಪುರುಷನದಾಗಿರುತ್ತದೆ ಎಂಬುದು ಕ್ಷೇತ್ರಕಾರ್ಯ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಕುರಿ ಸಾಕಾಣಿಕೆ ವೃತ್ತಿಯ ಮೂಲಕ ಅವಳ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾಳೆ. ಇಂದು ಪುರುಷರಿಗಿಂತ ಮಹಿಳೆಯರು ಪಶುಪಾಲನೆ ವೃತ್ತಿಯನ್ನು ಮುಂದುವರಿಸಿಕೊಂಡು ಹೋಗಲು ಹೆಚ್ಚಿನ ಆಸಕ್ತಿ ಹೊಂದಿದ್ದಾರೆ. ಮನೆಯಲ್ಲಿ ಅಡುಗೆ ಮಾಡಿಕೊಂಡು ಬುತ್ತಿ ತೆಗೆದುಕೊಂಡು ದನ, ಎಮ್ಮೆ ಕುರಿಗಳನ್ನು ಮೇಯಿಸಲು ಹೋಗುವರು. ಹಸು ಎಮ್ಮೆಗಳಿಂದ ಬೆಳಿಗ್ಗೆ ಹಾಲು ಕರೆದು ಹಾಲಿಗೆ ಎಪ್ಪು ಹಾಕಿ, ಮೊಸರು, ಮಜ್ಜಿಗೆ ಮಾಡಿ ಹೆಚ್ಚಾಗಿ ಮಹಿಳೆಯರೇ ಸೇವಿಸುತ್ತಾರೆ. ಇದು ಅವರ ಒಂದು ಒಪ್ಪತ್ತಿನ ಊಟವೆಂದೂ ಹೇಳಲಾಗುತ್ತಿದೆ.

**ಪಶುಪಾಲನೆಯ ಸಾಧಕ ಬಾಧಕಗಳು**

೧. "ಆಕಳು, ಎಮ್ಮೆ ಹಾಗೂ ಮೇಕೆಗಳಿಂದ ಹಾಲು ಸಂಗ್ರಹಿಸಿ ಮಾರಾಟ ಮಾಡುವುದು. ಹಾಲಿನಿಂದ ಬೆಣ್ಣೆ, ತುಪ್ಪ ತಯಾರಿಸಿ ಹಾಗೂ ಮಜ್ಜಿಗೆ, ಮೊಸರನ್ನು ಮಾರಾಟ ಮಾಡಬಹುದು. ಹಾಲು ಹಾಗೂ ಹಾಲಿನ ಉತ್ಪನ್ನಗಳು ಮಾನವನ ದೇಹಕ್ಕೆ ಅತ್ಯುತ್ತಮವಾದ ಆಹಾರವಾಗಿದೆ.

೨. ಕೃಷಿಯಿಂದ ದೊರಕುವ ಹುಲ್ಲು, ಹಿಂಡಿ, ಪಶುಗಳಿಗೆ ಉತ್ತಮವಾದ ಆಹಾರವಾಗಿದೆ. ಹಸಿರು, ಒಣಹುಲ್ಲು, ತೊಗರೆಸೊಪ್ಪು, ಅವರೆಸೊಪ್ಪು ಮುಂತಾದವು ಪಶುಗಳಿಗೆ ಪೌಷ್ಠಿಕತೆಯನ್ನು ನೀಡಿ ಹಾಲಿನ ಉತ್ಪಾದನೆ ಹೆಚ್ಚಾಗುವಂತೆ ಮಾಡುತ್ತದೆ. ಅಲ್ಲದೆ ಪ್ರಾಣಿಗಳು ದಷ್ಟಪುಷ್ಟವಾಗಿ ಬೆಳೆಯಲು ಕೂಡ ಪೂರಕವಾಗಿವೆ.

೩. ಪಶುಗಳಿಂದ ದೊರೆಯುವ ಸಗಣಿ ಗೊಬ್ಬರಗಳು ಕೃಷಿಗೆ ಅನುಕೂಲಕರ ಇದರಿಂದಾಗಿ ಭೂಮಿಯ ಫಲವತ್ತತೆ ಹೆಚ್ಚಾಗುತ್ತದೆ. ಅಧಿಕ ಪ್ರಮಾಣದಲ್ಲಿ ಫಸಲು ಬೆಳೆಯಲು ಅನುಕೂಲಕರವಾಗುವುದು.

೪. ಬೇಡ ಮಹಿಳೆಯರು ಕೃಷಿ ವೃತ್ತಿ ಮಾಡುತ್ತಿರುವವರು ಮಳೆ ಆಧಾರಿತವಾಗಿ ಬೆಳೆ ಬೆಳೆಯುವರೆ ಹೆಚ್ಚಾಗಿದೆ. ಮಳೆ ಬಾರದೆ ಇದ್ದ ಸಂದರ್ಭದಲ್ಲಿ ಅವರ ಬದುಕು ಅಸಹನೀಯವಾಗಿರುತ್ತದೆ. ಕೃಷಿ ವೃತ್ತಿಯ ಜೊತೆಗೆ ಪಶುಪಾಲನೆ ಕೈಗೊಂಡಿದ್ದರೆ ಇದರ ಆದಾಯದ ಮೇಲೆ ಬದುಕಲು ನೆರವಾಗುತ್ತದೆ".[೬]

ಸರಕಾರದಿಂದ ಪಶುಪಾಲನೆಗೆ ಸಹಾಯವಾಗುವಂತೆ ಕೆಲವೊಂದು ರಿಯಾಯಿತಿಗಳನ್ನು ನೀಡಬೇಕು.

**ಪಶುಪಾಲನೆ ಮಾಡುವ ಮಹಿಳೆಯರ ಕೋಷ್ಟಕ**

| ಕ್ರಸಂ. | ಕೇರಿಯ ಹೆಸರು | ಸಂದರ್ಶಿತ ಕುಟುಂಬಗಳ ಸಂಖ್ಯೆ | ಸಾಕುವ ಪ್ರಾಣಿಗಳು | ಒಟ್ಟು |
|---|---|---|---|---|
| ೧ | ತಿಮ್ಮನಾಥಕೇರಿ | ೪೦ | ದನ ಕಾಯುವವರು | ೦೧ |
| ೨ | ಚೌಡಿಕೇರಿ | ೪೦ | ಮೇಕೆ ಕಾಯುವವರು | ೦೫ |
| ೩ | ಬಂಡೆಕೇರಿ | ೪೦ | ಎಮ್ಮೆ ಕಾಯುವವರು | ೦೨ |
| ೪ | ಹಿರೇಕೇರಿ | ೪೦ | ಕುರಿ ಸಾಕುವವರು | ೦೩ |
| ೫ | ಗೋನಾಳಕೇರಿ | ೪೦ | ಇಲ್ಲ | ೦೯ |
| ೬ | ಮನ್ಮಥಕೇರಿ | ೪೦ | ಕುರಿ ಸಾಕುವವರು | ೦೪ |
| ೭ | ತಳವಾರಕೇರಿ | ೪೦ | ಇಲ್ಲ | ೦೧ |

ಕಮಲಾಪುರದ ಏಳು ಕೇರಿಯ ಬೇಡ ಮಹಿಳೆಯರನ್ನು ಪ್ರತಿ ಕೇರಿಗೆ ೪೦ ಮಹಿಳೆಯನ್ನು ಸಂದರ್ಶಿಸಿದಾಗ ಇತ್ತೀಚಿನ ಬದಲಾವಣೆಯಿಂದಾಗಿ ಪಶುಪಾಲನೆ ವೃತ್ತಿ ಕಡಿಮೆಯಾಗಿದೆ. ಹೆಚ್ಚಾಗಿ ಇಂದೂ ಮಹಿಳೆಯರು ಕುರಿ ಸಾಕುತ್ತಿದ್ದು ಅದು ಕೇವಲ ೨-೩ ಎಂದರೆ ಹೆಚ್ಚು. ಅದರಲ್ಲಿ ಅವರು ಅವುಗಳನ್ನು ತಮ್ಮ ಮನೆಯ ಮುಂದೆ ಸಾಕುತ್ತ ಬೇಕಾದಂತಹ ಮೇವನ್ನು ಗದ್ದೆಗಳಿಂದ ತಂದು ಅವುಗಳನ್ನು ಸಾಕಿ ಸ್ವಲ್ಪ ದೊಡ್ಡದಾದ ನಂತರ ರೂ.೭೦೦೦/- ದಿಂದ ರೂ.೮೦೦೦/- ಗಳಿಗೆ ಮಾರಾಟ ಮಾಡುವ ಪದ್ಧತಿ ಇದೆ. ಇತರ ಕೇರಿಗಲ್ಲಿ ಅಲ್ಪಪ್ರಮಾಣದ ಕುರಿಗಳು, ಆಕಳುಗಳ ಸಂಖ್ಯೆ ಕಂಡುಬರುತ್ತದೆ. ಕುರಿ ಸಾಕಣಿಕೆಯಿಂದ ಮಾತ್ರ ಹೆಚ್ಚಿನ ಆದಾಯ ಸಿಗುತ್ತದೆ ಎಂದು ಹೇಳಬಹುದು.

**೩.೬. ದೈವಿ ಸಂಬಂಧಿ ಆಚರಣೆಗಳಲ್ಲಿನ ಮಹಿಳೆಯರ ಆರ್ಥಿಕತೆ**

"ಬುಡಕಟ್ಟುಗಳು ನಿಸರ್ಗ ಶಕ್ತಿಯಲ್ಲಿನ ಅಪಾರ ನಂಬಿಕೆಯಿಂದ ಅವುಗಳ ಆರಾಧನೆಗೆ ಮೊದಲು ಮಾಡಿದವು. ದುಷ್ಟಸಕ್ತಿಗಳಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಮಾರಿ, ಮಸಣಿ, ದೆವ್ವ, ಭೂತಗಳನ್ನು ಕಲ್ಪಿಸಿಕೊಳ್ಳಲಾಯಿತು. ಈ ಹಿನ್ನೆಲೆಯಲ್ಲಿ ದೈವರಾಧನೆ ಬದುಕಿನ ಒಂದು ಅವಿಭಾಜ್ಯ ಅಂಗವಾಗಿ ಬೆಳೆಯಿತು. ದೇವರನ್ನು ಒಲಿಸಿಕೊಳ್ಳಲು, ದೇವರ ಪ್ರಾರ್ಥನೆ, ವರ್ಣನೆಗಳ ಸಾಹಿತ್ಯ ನಿರ್ಮಾಣಗೊಂಡಿತು. ದೈವಾರಾಧನೆಗೆ ಸಂಬಂಧಿಸಿದ ಧಾರ್ಮಿಕ ಸಂಪ್ರದಾಯಗಳು ಸಾಮಾಜಿಕ ಪರಂಪರೆಯಲ್ಲಿ ಭದ್ರವಾಗಿ ನೆಲೆಯೂರಿದವು. ತಾವು ನಂಬಿದ ದೇವ ದೇವತೆಗಳನ್ನು ಕುರಿತು ಕಟ್ಟಿದ ಹಾಡು, ಕಥೆಗಳು ಅದ್ಭುತ ಕಲ್ಪನಾ ವೈಖರಿಯಿಂದ ಜನಪದ ಸಾಹಿತ್ಯವನ್ನು ಸಮೃದ್ಧಗೊಳಿಸಿದವು. ಇದರಲ್ಲಿ ದೇವರ ವರ್ಣನೆಯೇ ಪ್ರಮುಖವಾಗಿರುತ್ತದೆ. ದೇವರ ಬಗೆಗಿನ ಆತ್ಮೀಯತೆ, ಭಯ, ವೈಭವ, ಭಕ್ತಿ ಹೆಚ್ಚಾಗಿರುತ್ತದೆ. ಬಹುತೇಕ ಹಾಡುವವರು ಸ್ತ್ರೀಯರೇ ಆಗಿರುತ್ತಾರೆ".[೬]

ಕಮಲಾಪುರದ ಬೇಡ ಮಹಿಳೆಯರು ಆರ್ಥಿಕತೆಗೆ ಸ್ತ್ರೀದೇವತೆಗಳು ಸಹಕಾರಿಯಾಗಿವೆ. ಇವು ಮೂಲತಃ ಸ್ತ್ರೀ ದೇವತೆಗಳ ಪೂಜಾರಿಗಳು ಆಗಿದ್ದರೆಂದು ಸಂದರ್ಶನದ ಸಮಯದಲ್ಲಿ ಮಾಹಿತಿ ದೊರಕಿದೆ. ಅದಕ್ಕೆ ನಿದರ್ಶನವಾಗಿ ತಿಮ್ಮನಾಥಕೇರಿ ಪೂಜಾರಿ ನಿಂಗಮ್ಮನಿಗೆ ನಿಜಲಿಂಗಮ್ಮದೇವಿ ಪೂಜಾರಾಧನೆಯಿಂದ ಹಾಗೂ ಕೇರಿಯಲ್ಲಿ ನಡೆಯುವ ಮದುವೆಗಳಿಂದಾಗಿ ಕೇರಿಯಿಂದ ಧಾನ್ಯ ಮುಂತಾದ ವರಮಾನಗಳಿಂದ ಪೂಜಾರ್ ನಿಂಗಮ್ಮನಿಗೆ ಶ್ರೀಮಂತಿಕೆ ಇಲ್ಲದಿದ್ದರೂ ಬಡತನವಂತು ಇಲ್ಲ. ಹೀಗೆ ಆಕೆ ಮಗಳು ಸಹ ಪೂಜಾ ಕಾರ್ಯಗಳನ್ನು ಮಾಡುತ್ತಾ ಕೂಲಿ ಕೆಲಸವನ್ನು ಮಾಡಿಕೊಂಡು ಬದುಕುತ್ತಿದ್ದಾಳೆ.

**ದೈವದ ಹೆಸರಲ್ಲಿ ಭಿಕ್ಷಾಟನೆ ಪದ್ಧತಿ**

ನಿಜಲಿಂಗಮ್ಮನನ್ನು ಪೂಜಿಸುವ ಪೂಜಾರ್ ನಿಂಗಮ್ಮ ೫ ವರ್ಷಗಳಿಗೊಮ್ಮೆ ಶ್ರಾವಣ ಮಾಸದಲ್ಲಿ ಹಂಪೆಯ ವಿರೂಪಾಕ್ಷ ದೇವಾಲಯದಿಂದ ತುಂಬಿದ ಬಿಂದಿಗೆಯೊಡನೆ ದೇವಿಯನ್ನು ಕರೆತರುವ ಕೆಲಸ ನಡೆಯುತ್ತದೆ. ಆ ಸಂದರ್ಭದಲ್ಲಿ ತಾಯಿ ಮೈಮೇಲೆ ಬರುತ್ತಾಳೆ ಎಂದು ಹಲವಾರು ಹಿರಿಯರು ಹೇಳುತ್ತಾರೆ. ಆ ಸಂದರ್ಭದಲ್ಲಿ ಹಲವಾರು ಜನರು ತಮ್ಮ ಕಷ್ಟಗಳನ್ನು ಹೇಳಿಕೊಳ್ಳುವುದು, ಮಳೆ ಬೆಳೆಯ ಬಗೆಗೆ ಭವಿಷ್ಯ ಕೇಳುವುದು, ಸಂತಾನ ಬಗ್ಗೆ ಕೇಳುವುದು ಹೀಗೆ ನಡೆಯುತ್ತದೆ. ಅದು ಈಡೇರಿದರೆ ತಾಯಿಗೆ ಕೆಲವೊಂದು ವಸ್ತುಗಳನ್ನು ಕಾಣಿಕೆಯಾಗಿ ನೀಡುವ ಪದ್ಧತಿ ಇದ್ದು ಅವರ ಆರ್ಥಿಕ ನೆರವಾಗಿ ಆ ಕೇರಿಯ ಜನರು ಸಹಕಾರಿಯಾಗಿದ್ದಾರೆ.

ಕಮಲಾಪುರದ ಬೇಡ ಮಹಿಳೆಯರ ದೈವದ ಹೆಸರಿನ ಮೇಲೆ ಚಾಚುತಪ್ಪದೇ ಪ್ರತಿ ಮಂಗಳವಾರ ಅಮಾವಾಸ್ಯೆಯ ದಿನ ಅಂದರೆ ಸ್ತ್ರೀದೇವತೆಗಳ ವಾರಗಳೆಂದು ಈ ದಿನವನ್ನು ಗುರುತಿಸಲಾಗಿದೆ. ಆ ದಿನ ಬೆಳಗಿನ ಹೊತ್ತು ಕೆಲವೊಂದು ಬೇಡ ಮಹಿಳೆಯರು ಹೆಣ್ಣು ದೇವತೆಗಳಿಗೆ ಪೂಜೆಯನ್ನು ಮಾಡಿ ಹೂಗಳಿಂದ ಅಲಂಕರಿಸಿ ಗುಡಿಗೆ ಕುಂಕುಮ ಹಚ್ಚಿಕೊಂಡು ಮನೆ ಮನೆಗೆ ಹೋಗುವ ಪದ್ಧತಿ ಇದೆ. ಪ್ರತಿ ಮಂಗಳವಾರ ಕನಿಷ್ಠವೆಂದರೆ ೧೦ ರಿಂದ ೨೦ ಮನೆಗಳಿಗೆ ಹೋಗುವುದು ಮತ್ತು ಅವರಿಂದ ದವಸ ಧಾನ್ಯಗಳನ್ನು ಮತ್ತು ಹಣವನ್ನು ಪಡೆದು ಅವರಿಗೆ ಅಶೀರ್ವಾದ ಮಾಡುತ್ತಾರೆ. ಅಂದಿನ ದಿನ ಅವರು ಒಪ್ಪತ್ತು(ಉಪವಾಸ) ಇರುತ್ತಾರೆ. ಅವರ ಭಿಕ್ಷಾಟನೆ ಹೇಗಿರುತ್ತದೆ ಎಂಬುದಕ್ಕೆ ಕೆಲವೊಂದು ಅಂಶಗಳನ್ನು ಇಲ್ಲಿ ಗಮನಿಸಲಾಗಿದೆ. ಹಸಿರು ಸೀರೆ, ಹಸಿರುಬಳೆ, ಹಣೆತುಂಬ ಕುಂಕುಮ, ಕೈಯಲ್ಲಿ ಬೇವಿನಸೊಪ್ಪು, ಒಂದು ಮರ, ಜೋಗತಿ, ಹಿಂಬಾಲಕಿಯಾಗಿ ಒಬ್ಬ ಬಾಲಕಿಯನ್ನು ಕರೆದುಕೊಂಡು ಹೋಗಿ ಪುಟ್ಟಿಯಲ್ಲಿ ಸ್ತ್ರೀದೇವತೆಯಾದ ಮಾರಮ್ಮ, ದುರುಗಮ್ಮ, ನಿಂಗಮ್ಮ, ಸಣ್ಣದಾದ ವಿಗ್ರಹಗಳನ್ನು ಇಟ್ಟುಕೊಂಡು ಮನೆಮುಂದೆ ಬಂದು ಉಧೋ.... ಉಧೋ.... ಎಂಬ ಶಬ್ದವನ್ನು ಬಳಸುತ್ತಾರೆ. ಕೆಲವರು ಹಾ.... ಹಾ...... ಎಂಬ ಶಬ್ದವನ್ನು ಮಾಡುವುದು ಕಂಡುಬರುತ್ತದೆ. ಆ ಸಂದರ್ಭದಲ್ಲಿ ಮನೆಯಲ್ಲಿರುವ ಹಿರಿಯರು ತಾಯಿ, ಅಮ್ಮ ಬಂದಿದ್ದಾಳೆ ಎಂದು ಹೇಳಿ ಆ ಮಹಿಳೆಗೆ ಕಾಲಿಗೆ ನೀರು ಹಾಕಿ ಕುಂಕುಮ ಹಚ್ಚಿ ಒಳಗಡೆ ಇರುವ ಅಕ್ಕಿ, ಜೋಳ ಮರದಲ್ಲಿ ತಂದು ನೀಡಿದಾಗ ಪ್ರತಿಫಲವಾಗಿ ಜೋಗತಿ ಮಹಿಳೆ(ಜೋಗಮ್ಮ) ಕೈಯಲ್ಲಿರುವ ಕುಂಕುಮವನ್ನು ಆ ಮನೆಯವರಿಗೆ ಅದರಲ್ಲಿಟ್ಟು ಬೇವಿನ ಸೊಪ್ಪಿನಿಂದ ಅಶಿರ್ವಾದ ಮಾಡುತ್ತಾಳೆ. ಇಲ್ಲಿ ಮುಖ್ಯವಾಗಿ ಗಮನಿಸುವ ಅಂಶವೆಂದರೆ ಆಯಾ ಕೇರಿಯ ಬೇಡ ಜೋಗತಿ ಮಹಿಳೆಯರ ಅದೇ ಕೇರಿಯ ಮನೆಗಳಿಗೆ ಮಾತ್ರ ಭಿಕ್ಷಾಟನೆಗೆ ತೆರಳುತ್ತಾರೆ, ಹೊರತು ಬೇರೆಯ ಕೇರಿಗಳಿಗೆ ಹೋಗುವುದಿಲ್ಲ. ಕಾರಣ ಪ್ರತಿ ಕೇರಿಗಳಲ್ಲಿ ಬೇಡ ಜೋಗತಿ(ಜೋಗಮ್ಮರು) ಇರುವುದರಿಂದಾಗಿ ಇಲ್ಲಿ ಹೋಗಲಾಗದು. ಇನ್ನೊಂದು ಮುಖ್ಯವಾಗಿ ಗಮನಿಸುವ ಅಂಶವೆಂದರೆ ಪ್ರತಿ ಕೇರಿಗಳಲ್ಲೂ ತಮ್ಮದೇ ಆದ ಸ್ತ್ರೀದೇವತೆ ಇರುವುದರಿಂದ ಇಲ್ಲಿ

ಭಿಕ್ಷಾಟನೆ ಮಾಡುವರು. ಆದರೆ ಒಂದು ಕೇರಿಯ ಸ್ತ್ರೀ ದೇವತೆ ಮತ್ತೊಂದು ಕೇರಿಯ ಸ್ತ್ರೀ ದೇವತೆ ಸಂಬಂಧ ಇರುವುದರಿಂದಾಗಿ ತವರುಮನೆ ಎಂದು ತಿಳಿಸಿ ದೇವತೆಗಳಿಗೆ ಉಡಿ ಅಕ್ಕಿ ಹಾಕುವ ಪದ್ಧತಿ ಇದೆ. ಬೇಡ ಜೋಗತಿಯರೇ ಇಲ್ಲಿ ಭಾಗವಹಿಸುವುದು ಕಂಡುಬರುತ್ತದೆ. ಕೇರಿಯ ಅಭಿವೃದ್ಧಿಯ ಜೊತೆಗೆ ಅವರ ಆರ್ಥಿಕತೆಗೂ ನೆರವಾಗಿದೆ. ಮುಖ್ಯವಾಗಿ ಗಮನಿಸುವ ಅಂಶ ಕೇರಿಯಲ್ಲಿ ಏನಾದರೂ ಸಮಸ್ಯೆಗಳುಂಟಾದರೆ ಬೇಡ ಜೋಗತಿಯರ ಮನೆಗಳಿಗೆ ಹೋಗಿ ಅವರಿಂದ ಅಶೀರ್ವಾದ ಪಡೆಯುವ ಪದ್ಧತಿ ಇನ್ನು ಜೀವಂತವಾಗಿದೆ. ಅಷ್ಟಲ್ಲದೆ ಪ್ರತಿ ಮಂಗಳವಾರ, ಸೋಮವಾರ ಸ್ತ್ರೀ ದೇವತೆಗಳ ಪೂಜೆ ನಡೆಯುವ ಸಂದರ್ಭದಲ್ಲಿ ಭಕ್ತಾದಿಗಳು ದೇವಸ್ಥಾನಕ್ಕೆ ಬಂದಾಗ ಮಂಗಳಾರತಿ ಸಮಯದಲ್ಲಿ ಭಕ್ತರು ಹಣವನ್ನು ತಟ್ಟೆಯಲ್ಲಿ ಹಾಕುವ ಪದ್ಧತಿ ಇದೆ. ಕೆಲವರು ಹೊಲದಲ್ಲಿ ಚೆನ್ನಾಗಿ ಫಲ ನೀಡಿದರೆ ಸ್ವಲ್ಪಮಟ್ಟಿಗೆ ಅದನ್ನು ಬೇಡ ಜೋಗತಿ ಮಹಿಳೆಯರಿಗೆ ನೀಡುವುದು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದೆ. "ಕಮಲಾಪುರದ ಬೇಡ ಜೋಗತಿಯರೆಲ್ಲರೂ ದೇವದಾಸಿಯ ರಾಗಿದ್ದಾರೆಂಬುದು ಗಮನಿಸಬಹುದಾದ ಅಂಶವಾದರು ಅದರಲ್ಲಿ ಯಾರು ಸಹ ಅತ್ಯಂತ ಬಡತನದಲ್ಲಿಲ್ಲ ಎಂಬುದನ್ನು ಗಮನಿಸಬಹುದು. ಜೊತೆಗೆ ಕೇರಿಯ ಹಿರಿಯರು ಕೇರಿಯಲ್ಲಿರುವ ಬೇಡ ಸಮುದಾಯದವರ ಮೇಲೆ ಪ್ರತಿ ತಿಂಗಳು ದೇವರ ಹೆಸರಿನ ಮೇಲೆ ೨೦ ರಿಂದ ೨೫ ರೂಪಾಯಿ ಗುಡಿ ಪಟ್ಟಿಯನ್ನು ನೀಡುವ ಪದ್ಧತಿ ಸುಮಾರು ೪೦ ವರ್ಷಗಳಿಂದ ಇದೆ. ಈ ಹಣವನ್ನು ಬ್ಯಾಂಕಿನಲ್ಲಿಟ್ಟು ಬಂದ ಬಡ್ಡಿಯ ಹಣದಲ್ಲಿ ದೇವತೆಗೆ ಬೇಕಾದ ಬಂಗಾರದ ಆಭರಣಗಳನ್ನು ಖರೀದಿಸುವುದು ಮತ್ತು ಜಾತ್ರೆಯ ಸಂದರ್ಭದಲ್ಲಿ ಬೇಕಾದ ಅಡುಗೆ ಪದಾರ್ಥಗಳನ್ನು ಖರೀದಿಸುವುದನ್ನು ಮಾಡುತ್ತಾರೆ. ಉಳಿದ ಕೆಲವೊಂದು ಸಾಮಾನುಗಳನ್ನು ಬೇಡ ಜೋಗತಿಗೆ ನೀಡುವ ಪದ್ಧತಿ ಇದೆ. ದೇವಸ್ಥಾನದ ಕಾರ್ಯದಿಂದ ಹಿಡಿದು ಮದುವೆ, ತೊಟ್ಟಿಲು, ನಾಮಕರಣ, ಋತುಮತಿ ಇಂತಹ ಎಲ್ಲ ಆಚರಣೆಗಳಲ್ಲಿ ಬೇಡ ಜೋಗತಿಗೆ ಮಹತ್ವದವಾದ ಸ್ಥಾನ ಕಲ್ಪಿಸಿ ದೈವ ಸೃಷ್ಟಿಯಲ್ಲಿ ಆಕೆಯನ್ನು ಕಾಣುತ್ತಾರೆ.

**ಬೇಡ ಜೋಗತಿಯರ ಭಿಕ್ಷಾಟನೆ ಸಂದರ್ಭದಲ್ಲಿನ ಕೆಲವೊಂದು ನಿಯಮಗಳು**

೧. ಕೂದಲನ್ನು ಕಟ್ಟುವುದಿಲ್ಲ.

೨. ಹಣೆಗೆ ದೊಡ್ಡದಾದ ಕುಂಕುಮ ಧರಿಸುವುದು.

೩. ಬೇವಿನ ಸೊಪ್ಪಿನಲ್ಲಿ ಬೇವಿನ ಬೀಜ ತೆಗೆಯುವುದು

೪. ಎರಡು ಬಣ್ಣದ ಕುಂಕುಮ ಮಾತ್ರ ಬಳಸುವುದು (ಅರಿಶಿನ ಮತ್ತು ಕೆಂಪು)

೫. ಬೇರೆಯವರ ಮನೆಯಲ್ಲಿ ಊಟ ಸೇವಿಸದಿರುವುದು

೬. ಭಿಕ್ಷಾಟನೆ ಮಾಡುವ ಸಂದರ್ಭದಲ್ಲಿ ತಂಗಿ ಎನ್ನುವ ಪದವನ್ನು ಮಾತ್ರ ಬಳಸುವುದು ಇನ್ನು ಜೀವಂತವಾಗಿದೆ.

ಇಲ್ಲಿ ಕಂಡುಬರುವ ಸ್ತ್ರೀದೇವತೆಗಳ ಹೆಸರುಗಳು ಬೇಡ ಮಹಿಳೆಯರ ಮೇಲೆ ಇರುವುದನ್ನು ಮುಖ್ಯವಾಗಿ ಗಮನಿಸಬಹುದು. ನಿಜಲಿಂಗಮ್ಮ, ಮಾರಮ್ಮ, ತಾಯಮ್ಮ, ಗಂಗಮ್ಮ, ಹುಲಿಗೆಮ್ಮ, ಈರ್ದೆಸೆಮ್ಮ ಹೀಗೆ ಹಲವಾರು ಹೆಸರುಗಳಿವೆ. ದೇವಸ್ಥಾನಕ್ಕೆ ಬೇಕಾದ ಕಾರ್ಯಕಲಾಪ, ಹಣಕಾಸಿನ ಸೌಲಭ್ಯವನ್ನು ಇಲ್ಲಿ ಬೇಡ ಜೋಗತಿಯರೆ ನಿಭಾಯಿಸುವುದು ಹಾಗೂ ಕೇರಿಯ ಎಲ್ಲ ಹಿರಿಯರೂ ದೇವಸ್ಥಾನಕ್ಕೆ ಹಣಕಾಸಿನ ಸೌಲಭ್ಯ ಒದಗಿಸುತ್ತಾರೆ. ಆದರೆ ಇದುವರೆಗೂ ಯಾವುದೇ ಬೇಡ ಜೋಗತಿಯನ್ನು ಎಷ್ಟು ಖರ್ಚು ಮಾಡಿದ್ದೀಯ ಎಂದು ಯಾರೂ ಕೇಳುವುದಿಲ್ಲ. ಪಂಚಾಯಿತಿ ಸಂದರ್ಭದಲ್ಲಿ ಆ ಮಹಿಳೆಯನ್ನು ಕರೆಯುವುದಿಲ್ಲ. ಏಕೆಂದರೆ ಆಕೆಯ ಮೇಲೆ ಅಷ್ಟೊಂದು ಗೌರವವಿರುತ್ತದೆ ಹಾಗೂ ದೈವೀ ಸ್ವರೂಪಳು ಎಂಬ ನಂಬಿಕೆಯು ಇಲ್ಲಿಯ ಜನರಲ್ಲಿದೆ.

ಇಲ್ಲಿಯ ಮಹಿಳೆಯರು ಭಿಕ್ಷಾಟನೆಯಿಂದ ಬಂದ ಆದಾಯದ ಜೊತೆಗೆ ದೇವಸ್ಥಾನದ ಕಾರ್ಯ ಕಲಾಪಗಳಿಂದ ಬಂದ ಆದಾಯವು ತಮ್ಮ ಮನೆಯ ನಿರ್ವಹಣೆಯ ಜೊತೆಗೆ ತಮ್ಮ ಮಕ್ಕಳ ಶಿಕ್ಷಣಕ್ಕಾಗಿ ಖರ್ಚು ಮಾಡುತ್ತಾರೆ. ಇವರು ಬಿಡುವಿನ ಸಮಯದಲ್ಲಿ ಕೂಲಿ ಕೆಲಸವನ್ನು ನಿರ್ವಹಿಸಿಕೊಂಡು ಬರುವುದನ್ನು ಗಮನಿಸಲಾಗಿದೆ. ದೇವಸ್ಥಾನದಲ್ಲಿ ಹೆಚ್ಚಿನ ಮಟ್ಟದ ಆದಾಯ ಇವರಿಗೆ ಸಿಗುವ ಸಮಯವೆಂದರೆ ಅದು ದಸರಾ ಮತ್ತು ಯುಗಾದಿ ಹಬ್ಬದಲ್ಲಿ ಹೆಚ್ಚು. ದಸರಾ ಸಂದರ್ಭದಲ್ಲಿ ಬನ್ನಿಕಾಳಮ್ಮನಿಗೆ ಬನ್ನಿ ಮುಡಿಯುವ ಸಂದರ್ಭದಲ್ಲಿ ಬೇಡ ಜೋಗತಿಯರು ಮೊದಲ ಬನ್ನಿ ಮುಡಿದು ನಂತರ ಭಕ್ತಾದಿಗಳಿಗೆ ಅವಕಾಶವಿರುವುದರಿಂದ ಪ್ರತಿಯೊಬ್ಬರು ಜೋಗತಿಯ ಅಶೀರ್ವಾದ ಪಡೆದ ಹಣವನ್ನು ತಟ್ಟೆಯಲ್ಲಿ ಹಾಕುತ್ತಾರೆ. ಇದು ಆ ಮಹಿಳೆಯಗೆ ಆದಾಯಕ್ಕೆ ನೆರವಾಗುತ್ತದೆ.

ಒಟ್ಟಾರೆಯಾಗಿ ಇಲ್ಲಿಯ ಏಳು ಕೇರಿ ಬೇಡ ಮಹಿಳೆಯರಲ್ಲಿ ಕೆಲವೊಂದು ಕೇರಿಗಳಲ್ಲಿ ಹೊರತುಪಡಿಸಿದರೆ ಪ್ರತಿಯೊಂದು ಕೇರಿಯಲ್ಲಿ ಬೇಡ ಜೋಗತಿ ಮಹಿಳೆಯರ ದೈವವೇ ಅವರ ಆರ್ಥಿಕತೆಗೆ ಪ್ರಮುಖವಾದ ಆದಾಯದ ಮೂಲವೆಂದೂ ಗುರುತಿಸಲಾಗಿದೆ. ಜೊತೆಗೆ ಇದು ಸುಮಾರು ವರ್ಷಗಳಿಂದ ನಿರಂತರವಾಗಿ ನಡೆಯುವ ಕಾರ್ಯವೆಂದೂ ಕಾಣಬಹುದಾಗಿದೆ.

### ೩.೭. ಖಾಸಗಿ ಕ್ಷೇತ್ರ

ವೃತ್ತಿ ಅಥವಾ ಉದ್ಯೋಗಗಳು ಮಹಿಳೆಯರಿಗೆ ಆರ್ಥಿಕ ಸ್ವಾವಲಂಬನೆಯ ಮೂಲಗಳಾಗಿವೆ. ಮಹಿಳೆಯರು ಕುಟುಂಬ ಜೀವನದ ಜೊತೆ ಜೊತೆಯಲ್ಲಿಯೇ ಉದ್ಯೋಗ, ಆರ್ಥಿಕ ಸ್ವಾವಲಂಬನೆ ಪಡೆಯುವಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತಹ ಪರಿಸರ ಹೆಚ್ಚಾಗಿ ನಿರ್ಮಾಣವಾಗಬೇಕು. ನಗರ ಪ್ರದೇಶದ ಮಹಿಳೆಯರಿಗೆ ಶಿಕ್ಷಣ, ಆರೋಗ್ಯ, ಸಮಾನತೆ ಇದ್ದರೂ ಕೂಡ ಇಂದು ಸರಿಯಾದ ರೀತಿಯಲ್ಲಿ ಶಿಕ್ಷಣ ಪಡೆಯದೇ ವಂಚಿತರಾಗುತ್ತಿದ್ದಾರೆ. ಉನ್ನತ

ಶಿಕ್ಷಣ, ವೃತ್ತಿ ತರಬೇತಿ, ತಂತ್ರಜ್ಞಾನ ಮತ್ತು ಉದ್ಯಮಶೀಲತೆಗಳಲ್ಲಿ ಉದ್ಯೋಗಾವಕಾಶಗಳನ್ನು ಹೆಚ್ಚಿಸುವುದರಿಂದ ಮಹಿಳೆಯರು ಆರ್ಥಿಕವಾಗಿ ಸಶಕ್ತೀಕರಣಗೊಳ್ಳಬಹುದು. ಅವರ ಆರ್ಥಿಕ ಪರಿಸ್ಥಿತಿ ಮತ್ತು ಸ್ವಸಾಮರ್ಥ್ಯ ಹೆಚ್ಚಿಸಲು ಉದ್ಯೋಗ, ಸೇವಾಸೌಲಭ್ಯ, ಸಾಮಾಜಿಕ ಅವಕಾಶಗಳನ್ನು ನೀಡಿ ಸಂಘಟಿತ ಶಕ್ತಿಯನ್ನು ಬೆಳೆಸುವುದರಿಂದ ಸಬಲೀಕರಣ ಪ್ರಕ್ರಿಯೆಯು ಚಾಲನೆಯಲ್ಲಿರುತ್ತದೆ. ಮಹಿಳೆಯರು ಸಮುದಾಯದಲ್ಲಿ ಸಾರ್ವಜನಿಕ ಚಟುವಟಿಕೆಗಳಲ್ಲಿ ಭಾಗವಹಿಸುವುದರಿಂದ ಅರಿವು, ಆತ್ಮವಿಶ್ವಾಸ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಗಳಿಸಿಕೊಳ್ಳುತ್ತಾರೆ. ಅವರ ಕೌಶಲ್ಯ ಅಧಿಕಾರ, ನಿರ್ಧಾರಗಳನ್ನು ಪಡೆಯಲು ಸ್ವಪ್ರಯತ್ನದ ಮೂಲಕ ಆತ್ಮವಿಶ್ವಾಸ ಬೆಳೆಸಿಕೊಳ್ಳಬೇಕು. ಅದರಿಂದ ಕುಟುಂಬ ಮತ್ತು ಸಮುದಾಯದಲ್ಲಿ ನಿರ್ಧಾರ ಕೈಗೊಳ್ಳುವ ಹಕ್ಕು, ಅಧಿಕಾರ ಸ್ತ್ರೀಯರಿಗೆ ಲಭ್ಯವಾಗುತ್ತದೆ.

ಕೇಂದ್ರ ಹಾಗೂ ರಾಜ್ಯ ಸರಕಾರಗಳು ಕಂಪ್ಯೂಟರಿಕರಣದ ಹೆಸರಿನಲ್ಲಿ ಕುಸಿಯುತ್ತಿರುವ ಆರ್ಥಿಕತೆಯನ್ನು ರಕ್ಷಿಸುವ ಹೆಸರಿನಲ್ಲಿ ಹುದ್ದೆಗಳನ್ನು ಕಡಿತಗೊಳಿಸುತ್ತಿದ್ದು ಇಂದು ಅಲ್ಪ ಸ್ವಲ್ಪ ವಿದ್ಯಾಭ್ಯಾಸ ಪಡೆದ ಮಹಿಳೆಯರ ನಿರುದ್ಯೋಕ್ಕೆ ಬಲಿಯಾಗುತ್ತಿದ್ದಾರೆ. ಅದರಲ್ಲಿ ಸಣ್ಣ ಪುಟ್ಟ ಕೈಗಾರಿಕೆಗಳಲ್ಲೂ ಕೆಲಸ ಮಾಡುವ ಮಹಿಳೆಯರ ಪಾಡಂತೂ ಹೇಳತೀರದು. ಏಕೆಂದರೆ ಈಗಾಗಲೇ ಸಣ್ಣ ಕೈಗಾರಿಕೆಗಳು ಲಕ್ಷಾಂತರ ಸಂಖ್ಯೆಯಲ್ಲಿ ಮುಚ್ಚಿ ಹೋಗಿದ್ದರಿಂದ ಸಾವಿರಾರು ಸ್ತ್ರೀಯರ ಬದುಕಿಗೆ ಮಾಡಲಾಗಿದೆ.

ಇಂತಹ ಸ್ಪರ್ಧಾತ್ಮಕ ಯುಗದಲ್ಲಿ ಕಮಲಾಪುರದ ಬೇಡ ಮಹಿಳೆಯರ ಹೆಚ್ಚಾಗಿ ಕೃಷಿಯೇತರ ಕಾರ್ಯಚಟುವಟಿಕೆಗಳನ್ನು ಮಾಡುತ್ತಾ ತಮ್ಮ ಮನೆಯ ನಿರ್ವಹಣೆ ಮಾಡಿದರೂ ಸಹ ಅಭಿವೃದ್ಧಿ ಆಗುತ್ತಿಲ್ಲ. ಆದರೂ ಪ್ರತಿ ಕೇರಿಯಲ್ಲಿ ಸರಕಾರ ಮತ್ತು ಖಾಸಗಿ ಕ್ಷೇತ್ರದಲ್ಲಿ ಕೆಲಸ ಮಾಡುವವರ ಸಂಖ್ಯೆ ಬೆರಳೆಣಿಕೆಷ್ಟು ಮಾತ್ರ.

**ಇವರು ನಿರ್ವಹಿಸುವ ಪ್ರಮುಖ ಖಾಸಗಿ ಮತ್ತು ಸರಕಾರಿ ಕ್ಷೇತ್ರಗಳೆಂದರೆ,**

೧. ಕನ್ನಡ ವಿಶ್ವವಿದ್ಯಾಲಯದಲ್ಲಿ ಕಸ ಗುಡಿಸುವ ಕೆಲಸ

೨. ಅರಣ್ಯ ಇಲಾಖೆಯಲ್ಲಿ ಅಡುಗೆ ಮಾಡುವುದು

೩. ಹಂಪಿಯಲ್ಲಿ(ಕಸಬಾಳ್) ಸಸಿ ನೆಡುವುದು

೪. ಔಷಧಿ ಅಂಗಡಿಯಲ್ಲಿ ಕೆಲಸ ಮಾಡುವುದು

೫. ಫ್ಯಾಕ್ಟರಿಯಲ್ಲಿ ಕೆಲಸ ಮಾಡುವುದು

೬. ಅಂಗನವಾಡಿಯಲ್ಲಿ ತಾತ್ಕಾಲಿಕವಾಗಿ ಅಡುಗೆ ಮಾಡುವುದು

ಹೀಗೆ ಹಲವಾರು ಕ್ಷೇತ್ರದಲ್ಲಿ ಮಹಿಳೆಯರು ದುಡಿಯುತ್ತಿರುವುದು ಕಂಡುಬರುತ್ತದೆ. ಇದಕ್ಕೆ ಕಾರಣ ಮನೆಯಲ್ಲಿನ ಗಂಡುಮಕ್ಕಳು ಅವರಿಗೆ ಇದ್ದ ಕೆಲವೊಂದು ಚಟಗಳು ಕಾರಣವಾದರೂ

ಮಹಿಳೆಯರನ್ನು ಬೇರೆ ಬೇರೆ ಕ್ಷೇತ್ರದಲ್ಲಿ ಕೆಲಸಕ್ಕೆ ಹೋಗಲಾರದೆ ಮಾಡಿದ್ದಾರೆ. ಒಟ್ಟು ೭ ಕೇರಿಯ ಬೇಡ ಮಹಿಳೆಯರ ಅಧ್ಯಯನದ ದೃಷ್ಟಿಯಿಂದ ಪ್ರತಿ ಕೇರಿಯ ೪೦ ಕುಟುಂಬಗಳ ಸಂದರ್ಶನದಲ್ಲಿ ಅದರಲ್ಲಿ ಹೆಚ್ಚಾಗಿ ಮಹಿಳೆಯರು ಕೃಷಿಯೇತರ ಕೆಲಸವನ್ನು ಹೆಚ್ಚು ಮಾಡುತ್ತಿದ್ದಾರೆ ಎಂಬುದನ್ನು ಕಂಡುಕೊಳ್ಳಲಾಗಿದೆ. ಇತ್ತೀಚಿಗೆ ತಮ್ಮ ಮಕ್ಕಳಿಗೆ ಶಿಕ್ಷಣವನ್ನು ಕೊಡಿಸುವುದರ ಜೊತೆಗೆ ನಮ್ಮ ಕಷ್ಟ ನಮ್ಮ ಮಕ್ಕಳಿಗೆ ಬರಬಾರದು ಎಂಬ ಆಸೆಯನ್ನು ಈ ಮಹಿಳೆಯರು ವ್ಯಕ್ತಪಡಿಸಿದ್ದಾರೆ. ವಿಭಕ್ತ ಕುಟುಂಬಗಳಲ್ಲಿ ಮಹಿಳೆಯರು ಹೆಚ್ಚಾಗಿ ಬೇರೆ ಬೇರೆ ವಲಯಗಳಲ್ಲಿ ಸೇವೆ ಸಲ್ಲಿಸುತ್ತಿರುವುದು ಕಂಡುಬರುತ್ತದೆ.

**೩.೮. ಸರಕಾರಿ ಕ್ಷೇತ್ರ ಮತ್ತು ಮಹಿಳೆ**

ಇಂದು ಸರಕಾರಿ ನೌಕರಿ ಎಂಬುದು ಬಹುಶಃ ಬಡತನದಲ್ಲಿರುವ ಎಲ್ಲ ಸಮುದಾಯಗಳ ಕನಸಿನ ಮಾತಾಗಿದೆ. ಅದರಲ್ಲಿ ಉದ್ಯೋಗ ಪಡೆದುಕೊಳ್ಳಬೇಕಾದರೆ ಕೆಲವೊಂದು ಮಾನದಂಡಗಳ ಮುಖಾಂತರ ಅವರನ್ನು ಅಳೆಯಲಾಗಿದೆ. ಅದರಲ್ಲಿ ಮುಖ್ಯವಾಗಿ ಶಿಕ್ಷಣ, ನೈಪುಣ್ಯತೆ, ತರಬೇತಿ ಮುಂತಾದವುಗಳನ್ನು ಹೊಂದಿದವರಿಗೆ ಪ್ರಥಮ ಆದ್ಯತೆ. ಸರಕಾರವು ಹಲವಾರು ಯೋಜನೆಗಳನ್ನು ಹಾಕಿಕೊಂಡರೂ ಇಂದು ಸಂಪೂರ್ಣವಾಗಿ ಮಹಿಳೆಯರು ಶಿಕ್ಷಣವನ್ನು ಪಡೆಯಲಾರದ ಸ್ಥಿತಿಗೆ ಬಂದು ನಿಂತಿದೆ. ಇದನ್ನು ನೋಡುವುದಾದರೆ ಶೈಕ್ಷಣಿಕವಾಗಿ ತುಂಬಾ ಹಿಂದುಳಿದಿರುವ ಕಮಲಾಪುರದ ಬೇಡ ಮಹಿಳೆಯರು ಸರ್ಕಾರಿ ಹುದ್ದೆಗಳಿಗೆ ಹೋಗುವ ಮಟ್ಟದ ಶಿಕ್ಷಣ ಪಡೆಯಲಾರದ ಸ್ಥಿತಿಯಲ್ಲಿರುವುದು ಕಂಡುಬರುತ್ತದೆ. ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ಕಮಲಾಪುರದ ಬೇಡ ಮಹಿಳೆಯರು ಕೇವಲ ಮನೆಯ ಕೆಲಸ, ಹೊಲದ ಕೆಲಸ, ಮಕ್ಕಳ ಲಾಲನೆ ಪಾಲನೆ ಮಾಡುತ್ತಾ ಕಾಲವನ್ನು ಕಳೆಯುವಂಥ ಪರಿಸ್ಥಿತಿಯನ್ನು ನಿರ್ಮಾಣ ಮಾಡಿಕೊಂಡಿದ್ದಾರೆ. ಇದರಲ್ಲಿ ಮುಖ್ಯವಾಗಿ ಕೆಲವೊಂದು ಕೇರಿಯ ಮಹಿಳೆಯರು ೧೦ ಮತ್ತು ೧೨ನೇ ತರಗತಿ ಅಭ್ಯಾಸ ಮಾಡಿದ್ದು(ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಿದ್ದಾರೆ) ಸರಕಾರಿ ಕೆಲಸ ದೊರೆಯುವುದಿಲ್ಲ ಎಂದು ಬೇರೆ ಬೇರೆ ವೃತ್ತಿಗಳಲ್ಲಿ ನಿರತರಾಗಿದ್ದಾರೆ. ಅದರಲ್ಲಿ ಮುಖ್ಯವಾಗಿ ಔಷಧಿ ಅಂಗಡಿ, ಮೊಬೈಲ್ ಅಂಗಡಿ ಕೆಲವೊಂದು ಕಛೇರಿಗಳಲ್ಲಿ ದುಡಿಯುತ್ತಿರುವುದನ್ನು ಕಾಣುತ್ತೇವೆ. ನಾನು ಅಧ್ಯಯನ ಮಾಡಿದ ೭ ಕೇರಿಯ ಬೇಡ ಮಹಿಳೆಯರಲ್ಲಿ ಹಿರೇಕೇರಿಯಲ್ಲಿ ಮಾತ್ರ ಅಲ್ಪ ಪ್ರಮಾಣದ ಮಹಿಳೆಯರು ಕೇಂದ್ರ ಸರಕಾರಿ ನೌಕರಿಯಲ್ಲಿರುವುದು ಕಂಡು ಬಂದಿದೆ. ಅದಕ್ಕೂ ಮುಂಚೆ ಇವರು ದಿನಗೂಲಿ ನೌಕರರಾಗಿ ನಂತರ ಖಾಯಂ ಆಗಿ ಕೆಲಸ ಮಾಡುತ್ತಿದ್ದಾರೆ.

ಇನ್ನು ಕೆಲವು ಮಹಿಳೆಯರು ಕನ್ನಡ ವಿಶ್ವವಿದ್ಯಾಲಯದಲ್ಲಿ ತಾತ್ಕಾಲಿಕವಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರನ್ನು ಸಂದರ್ಶಿಸಿದಾಗ ಮುಂದೆ ಖಾಯಂ ಆಗಬಹುದೆಂಬ ಭರವಸೆ ಇದೆ

ಎಂದು ಹೇಳುತ್ತಾರೆ. ಇವರು ಯಾವುದೆ ಶಿಕ್ಷಣವನ್ನು ಪಡೆದಿಲ್ಲ ಎಂಬುದು ಗಮನಾರ್ಹ. ಇನ್ನು ಪದವಿ ಪೂರೈಸಿದ ಹೆಣ್ಣುಮಕ್ಕಳು ಖಾಸಗಿ ಶಾಲೆಗಳಲ್ಲಿ ಶಿಕ್ಷಕಿಯರಾಗಿ ಕೆಲಸ ನಿರ್ವಹಿಸುತ್ತಿದ್ದಾರೆ.

**ಕಮಲಾಪುರದ ಬೇಡ ಮಹಿಳೆಯರ ಸರಕಾರಿ ಖಾಸಗಿ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿರುವವರ ವಿವರ**

| ಕ್ರಸಂ. | ಕೇರಿಯ ಹೆಸರು | ಸಂದರ್ಶಿತ ಕುಟುಂಬಗಳ ಸಂಖ್ಯೆ | ಸರಕಾರಿ ಕ್ಷೇತ್ರ | ಖಾಸಗಿ ಕ್ಷೇತ್ರ | ಒಟ್ಟು ಪ್ರತಿಶತ |
|---|---|---|---|---|---|
| ೧ | ತಿಮ್ಮನಾಥಕೇರಿ | ೪೦ | ೦೩ | ೧೨ | ೫.೩೭ |
| ೨ | ಚೌಡಿಕೇರಿ | ೪೦ | – | ೩ | ೦.೭೧ |
| ೩ | ಬಂಡೆಕೇರಿ | ೪೦ | ೦೫ | ೦೩ | ೨.೮೫ |
| ೪ | ಹಿರೇಕೇರಿ | ೪೦ | – | ೦೪ | ೧.೪೨ |
| ೫ | ಗೋನಾಳಕೇರಿ | ೪೦ | ೩ | ೨ | ೧.೭೮ |
| ೬ | ಮನ್ಮಥಕೇರಿ | ೪೦ | – | ೦೧ | ೦.೩೫ |
| ೭ | ತಳವಾರಕೇರಿ | ೪೦ | ೦೦ | ೦೧ | ೦.೩೫ |




ಕಮಲಾಪುರದ ಬೇಡ ಮಹಿಳೆಯರಲ್ಲಿ ಹೆಚ್ಚಾಗಿ ಸರಕಾರದ ಕೆಲಸ ಪಡೆಯುವಲ್ಲಿ ವಿಫಲರಾಗಿದ್ದಾರೆ. ಕಾರಣ ಇವರಿಗೆ ಅಕ್ಷರ ಜ್ಞಾನದ ಕೊರತೆ ಇವರಲ್ಲಿ ಹೆಚ್ಚಾಗಿ ಮಹಿಳೆಯರು ಅನಕ್ಷರಸ್ಥರಾಗಿದ್ದರಿಂದ ಇಂದೂ ಪಾರ್ಟ್ ಟೈಮ್ ಕೆಲಸ ಮಾಡುತ್ತಾ ಕೆಲವರು ಅಂಗನವಾಡಿ ಕೆಲಸಗಳಲ್ಲಿ ತೊಡಗಿದ್ದಾರೆ. ಇನ್ನು ಕೆಲ ಮಹಿಳೆಯರು ಅರಣ್ಯ ಇಲಾಖೆಯಲ್ಲಿ ಅಡುಗೆ ಮಾಡಲು ಹೋಗುತ್ತಿರುವುದು ಕಂಡುಬರುತ್ತದೆ. ಅದರಲ್ಲಿ ತಿಮ್ಮನಾಥಕೇರಿಯ ಕೆಲ ಮಹಿಳೆಯರು ಸರಕಾರಿ ಕೆಲಸವನ್ನು, ಕೆಲವು ಮಹಿಳೆಯರು ಆಸ್ಪತ್ರೆಗಳಲ್ಲಿ, ಅರಣ್ಯ ಇಲಾಖೆಗಳಲ್ಲಿ ಕೆಲಸವನ್ನು

ಮಾಡುತ್ತಿರುವುದು ಕಂಡುಬರುತ್ತದೆ. ಇತ್ತೀಚಿನ ದಿನಗಳಲ್ಲಿ ಈ ಕೇರಿಯ ಮಹಿಳೆಯರು ಕೆಲವು ಕಛೇರಿಗಳಲ್ಲಿ ಕೆಲಸಕ್ಕೆ ಹೋಗುವುದು ಕಂಡುಬರುತ್ತದೆ. ಇನ್ನು ಕೇಂದ್ರ ಸರಕಾರಿ ನೌಕರಿಯಲ್ಲಿ ರುವವರೆಂದರೆ ಹಿರೇಕೇರಿಯ ೨-೩ ಮಹಿಳೆಯರು ಡಿ. ದರ್ಜೆಯ ನೌಕಕರಾಗಿದ್ದಾರೆ.

**೩.೯. ಶಿಕ್ಷಣ ಮತ್ತು ಮಹಿಳೆ**

ಶಿಕ್ಷಣ ಶಕ್ತಿ ಎಂದು ಹೇಳುವಂತೆ, ಶಿಕ್ಷಣ ಮಾನವನ ನಿಪುಣತೆ, ಸನ್ಮಾರ್ಗ ಮತ್ತು ಸ್ವಾವಲಂಬನೆ ಸಾಮರ್ಥ್ಯವನ್ನು ಹೆಚ್ಚಿಸುವ ಮಹತ್ವಪೂರ್ಣ ಸ್ಥಾನ ಪಡೆದಿದೆ. ಶಿಕ್ಷಣ ಅಭಿವೃದ್ಧಿಯ ಮೂಲ ಮಂತ್ರ ಹಾಗೂ ಸಾಮಾಜಿಕ ಪರಿವರ್ತನೆಯ ಮೂಲ ಸಾಧನ. ಶಿಕ್ಷಣವನ್ನು ಅಲಕ್ಷಿಸಿ ಯಾವುದೇ ದೇಶ ಮುಂದುವರಿಯುವುದು ಸಾಧ್ಯವಿಲ್ಲ. ಶಿಕ್ಷಣವೆಂದರೆ ಪ್ರಾಣಿ ರೂಪದಲ್ಲಿರುವ ಮಾನವನನ್ನು ಮಹತ್ವದೆಡೆಗೆ ಕೊಂಡೊಯ್ಯುವ ಸಾಧನವಾಗಿದೆ. ಶಿಕ್ಷಣವು ಅನಾಗರೀಕನನ್ನು ನಾಗರೀಕನನ್ನಾಗಿಸುವ, ಅಜ್ಞಾನಿಯನ್ನು ಜ್ಞಾನಿಯಾಗಿಸುವ ಶಕ್ತಿಯನ್ನು ಹೊಂದಿದೆ. ಆದುದರಿಂದಲೇ ಶೈಕ್ಷಣಿಕ ಪ್ರಗತಿ ಸಾಧಿಸಿರುವ ಯಾವುದೇ ದೇಶವಾದರೂ ಅತೀ ಸುಲಭವಾಗಿ ಮುಂದುವರಿಯುವುದು. ಇಂದು ನಾವು ನೋಡುತ್ತಿರುವ ಅನೇಕ ಹಿಂದುಳಿದ ರಾಷ್ಟ್ರಗಳು ಶಿಕ್ಷಣದಲ್ಲಿ ಹಿಂದುಳಿದವುಗಳಾಗಿವೆ. ಅಕ್ಷರದ ಅರಿವಿಲ್ಲದ ಮನುಷ್ಯನಿಗೆ ತಿಳುವಳಿಕೆಯ ಸಾರ ಕಡಿಮೆ. ಯಾವುದೇ ದೇಶದ ಅಭಿವೃದ್ದಿಯು ಅಲ್ಲಿನ ಶಿಕ್ಷಣವನ್ನು ಅವಲಂಬಿಸಿರುತ್ತದೆ. ಈ ಕಾರಣದಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ ಶಿಕ್ಷಣಕ್ಕೆ ಮಹತ್ವವಾದ ಸ್ಥಾನ ನೀಡಲಾಗಿದೆ. ಜೊತೆಗೆ ಅಭಿವೃದ್ಧಿಯ ಅಳತೆಗೋಲಾಗಿದೆ.

ಸರಕಾರ ಅನೇಕ ಯೋಜನೆಗಳನ್ನು ತಂದರೂ ಇದನ್ನು ಸರಿಯಾಗಿ ಉಪಯೋಗಿಸಿಕೊಳ್ಳಲು ಬೇಡ ಸಮುದಾಯಕ್ಕೆ ಸಾಧ್ಯವಾಗುತ್ತಿಲ್ಲ. ಇವರಲ್ಲಿ ಶಿಕ್ಷಣದ ಕೊರತೆ ಬಹಳಷ್ಟು ಇದೆ. ಒಟ್ಟಾರೆಯಾಗಿ ಬೇಡ ಸಮುದಾಯದಲ್ಲಿ ಕಂಡುಬರುವ ಸಾಕ್ಷರತೆ ಪ್ರಮಾಣ ಹಾಗೂ ಶೈಕ್ಷಣಿಕ ಮಟ್ಟಗಳಲ್ಲಿನ ಪ್ರಮಾಣಗಳಿಂದ ತಿಳಿದು ಬರುವ ಅಂಶವೆಂದರೆ ಇವರಲ್ಲಿ ಕೃಷಿಗೆ ಸಂಬಂಧಿಸಿದ ಚಟುವಟಿಕೆಗಳು ಹೆಚ್ಚು ಪ್ರಭಲವಿರುವುದರಿಂದ ಆರ್ಥಿಕವಾಗಿ, ರಾಜಕೀಯವಾಗಿ ಪ್ರಬಲರಲ್ಲದ ಬಿಕ್ಕಟ್ಟಿನಲ್ಲಿ ಸಿಲುಕಿಕೊಂಡಂತಾಗಿದೆ. ಶಿಕ್ಷಣದ ಬಗ್ಗೆ ಇನ್ನು ಒಲವು ತೋರಿಸಿಲ್ಲ. ಹೀಗಾಗಿ ಈ ಸಮುದಾಯ ಸಾಕ್ಷರತೆಯಲ್ಲಿ ಹಿಂದುಳಿಯಲು ಕಾರಣವಾಗಿದೆ. ಸಮುದಾಯದ ಶೈಕ್ಷಣಿಕ ಅಭಿವೃದ್ಧಿಯ ಕಡೆಗೆ ಸರ್ಕಾರ ಹೆಚ್ಚಿನ ಗಮನ ಕೊಡಬೇಕೆಂದುದು ತುಂಬಾ ಅವಶ್ಯಕತೆಯಿದೆ.

ಪರಿಶಿಷ್ಟ ಪಂಗಡ ಎಂದೂ ಸರ್ಕಾರ ಗುರುತು ಮಾಡಿ ಸೌಲಭ್ಯಗಳನ್ನು ನೀಡುವ ಈ ಸಮುದಾಯಲ್ಲಿದ್ದು ಒಟ್ಟು ವಿದ್ಯಾವಂತರ ಸಂಖ್ಯೆ ಕೇವಲ ಬೆರಳಕೆಯಷ್ಟೇ. ಮಹಿಳೆಯರ ಸಂಖ್ಯೆ ಅತ್ಯಂತ ಕಡಿಮೆ. ಅಕ್ಷರದ ಅರಿವಿನ ಮೂಲಕವೇ ಜ್ಞಾನದ ಪರಧಿಯನ್ನು ಅಳೆಯುವ ಮತ್ತು ಆ ಮೂಲಕ ಸ್ಥಾನಮಾನ ಅವರಿಗೆ ಉದ್ಯೋಗ ನೀಡುವ ವ್ಯವಸ್ಥೆಯಡಿಯಲ್ಲಿ ಅಕ್ಷರದ ಅರಿವಿನ

ಪಡೆದವರು ಅತ್ಯಂತ ನಿಕೃಷ್ಟ ಸ್ಥಿತಿಯಲ್ಲಿರುವುದು ಸಹಜವೇ ಆಗಿಬಿಟ್ಟಿತು. ದೈಹಿಕ ಶ್ರಮವನ್ನು ಬಂಡವಾಳವನ್ನಾಗಿ ಹೂಡಿ ದುಡಿಯುವ ಶ್ರಮಜೀವಿಗಳಿಗೆ ಇಂದಿಗೂ ನಮ್ಮಲ್ಲಿ ಸಲ್ಲುತ್ತಿರುವ ಮಾನ್ಯತೆ ಯಾವ ನೆಲೆಯದು ಎಂಬ ಸತ್ಯ ತಿಳಿಯಲಾರದ ಪರಿಸ್ಥಿತಿ ನಮ್ಮ ಮುಂದೆ ಬಂದು ನಿಂತಿದೆ.

ವ್ಯಕ್ತಿತ್ವದ ವಿಕಾಸಕ್ಕೆ ಮಾನವ ಹಕ್ಕು ಮತ್ತು ಸ್ವಾತಂತ್ರ್ಯವನ್ನು ಗೌರವಿಸುವುದಕ್ಕೆ ಶಿಕ್ಷಣ ಅಗತ್ಯವಾದುದು. ಶಿಕ್ಷಣವೆಂದರೆ ನಮ್ಮನ್ನು ನಾವು ಗೌರವಿಸುವುದಕ್ಕೆ ಜೊತೆಗೆ ಬೇರೆಯವರು ನಮಗನಿಸುವುದಕ್ಕೆ ಬೇಕು. ಇದು ನಮ್ಮ ಸಮಾಜದ ಏಳ್ಗೆಗೆ ಇರುವ ಸಾಧನವಾಗಿದೆ. ಅದಕ್ಕೆ ಶಿಕ್ಷಣವನ್ನು ಮೂಲಭೂತ ಹಕ್ಕು ಎಂದು ಸಂವಿಧಾನದಲ್ಲಿ ತಿಳಿಸಲಾಗಿದೆ.

"ಸ್ವಾತಂತ್ರ್ಯ ಪೂರ್ವದಿಂದಲೂ ಮತ್ತು ಸ್ವಲ್ಪಮಟ್ಟಿಗೆ ಈಗಲೂ ಮಹಿಳೆಗೆ ಶಿಕ್ಷಣ ಕೊಡಿಸುವುದರ ಹಿಂದಿನ ಉದ್ದೇಶ ಅವಳನ್ನು ಕೇವಲ ಉತ್ತಮ ತಾಯಿಯನ್ನಾಗಿ. ಉತ್ತಮ ಗೃಹಿಣಿಯನ್ನಾಗಿ, ಮಾಡುವುದಾಗಿಯೇ ವಿನಃ ಅವಳನ್ನು ವೃತ್ತಿಪರ ಮಹಿಳೆಯರನ್ನಾಗಿ ಮಾಡುವುದಾಗಿಲ್ಲ. ಮಹಿಳೆಯರ ದೃಷ್ಟಿಯಿಂದ ಶಿಕ್ಷಣವು ಅವರನ್ನು ಪ್ರಾಥಮಿಕವಾಗಿ ಉತ್ತಮ ಗೃಹಿಣಿಯರನ್ನಾಗಿ ಮತ್ತು ಉತ್ತಮ ತಾಯಿಯನ್ನಾಗಿ ಮಾಡುವುದಾಗಿದೆ. ಸಾಕ್ಷರತೆ ಯಾಕೆ ಬೇಕೆಂದರೆ ಅದರಿಂದ ಮತ್ತೊಂದನ್ನು ಸಾಧಿಸಿಕೊಳ್ಳಬಹುದಾಗಿದೆ. ಒಬ್ಬ ಮಹಿಳೆಗೆ ಸಾಕ್ಷರತೆ ತನ್ನಷ್ಟಕ್ಕೆ ಮಹತ್ವವಾದುದೆಂದು ಪರಿಭಾವಿಸಿಕೊಳ್ಳುವ ಕ್ರಮ ಎಲ್ಲರಲ್ಲೂ ಕಂಡುಬರುವುದಿಲ್ಲ. ಅಲ್ಲಿ ಅವಳನು ವೃತ್ತಿಪರಳನ್ನಾಗಿ ಮಾಡುವುದು ಅನುಷಂಗಿಕವಾಗಿತ್ತು.

ಭಾರತದಲ್ಲಿ ಮಹಿಳೆಯರ ಶಿಕ್ಷಣಕ್ಕೆ ಆದ್ಯತೆಯು ದೊರೆದಿರುವುದಕ್ಕೆ ಪ್ರಿಜ್ ಮತ್ತು ಸೆಗ್ ನೀಡುವ ಮೂರು ಕಾರಣಗಳು ಹೀಗಿವೆ.

ಲಿಂಗಸಂಬಂಧಿ ಶ್ರಮ ವಿಭಜನೆಯಿಂದಾಗಿ ಶಿಕ್ಷಣದಿಂದ ದೊರೆಯಬಹುದಾದ ನಿರೀಕ್ಷಿತ ಲಾಭಗಳು ಜನರಿಗೆ ಅತ್ಯಂತ ಕಡಿಮೆಯೆಂದು ಕಾಣುತ್ತದೆ. ಏಕೆಂದರೆ ಬಾಲಕಿಯರು ಸಾಮಾನ್ಯವಾಗಿ ನಮ್ಮ ಸಂದರ್ಭದಲ್ಲಿ ಮನೆ ವಾರ್ತೆ ಮತ್ತು ಮಕ್ಕಳ ಪಾಲನೆಯ ಜವಾಬ್ದಾರಿಯನ್ನು ನಿರ್ವಹಿಸಬೇಕಾಗುತ್ತದೆ. ಇದರಿಂದಾಗಿ ಹಿರಿಯರಿಗೆ ಮಹಿಳೆಯರ ಶಿಕ್ಷಣವು ಮಹತ್ವದ್ದಾಗಿ ಕಾಣುವುದಿಲ್ಲ.

ಭಾರತದಲ್ಲಿರುವ ಪಿತೃಪ್ರಧಾನ ವಾರಸುದಾರಿಕೆಯಿಂದ ಪಾಲಕರು ಮಹಿಳೆಯರ ಶಿಕ್ಷಣಕ್ಕೆ ಇಷ್ಟು ಮಹತ್ವ ಕೊಡಬೇಕೋ ಅಷ್ಟ ಮಹತ್ವ ನೀಡುತ್ತಿಲ್ಲ. ಏಕೆಂದರೆ ಮಹಿಳೆಗೆ ಶಿಕ್ಷಣ ನೀಡುವುದೆಂದರೆ ಪಕ್ಕದ ಮನೆಯ ಗಿಡಕ್ಕೆ ಸೇರಿದಂತೆ ಎಂಬ ನಾಣ್ನುಡಿ ಜನರಲ್ಲಿ ಗಟ್ಟಿಯಾಗಿ ನೆಲೆಯಾಗಿದೆ.

ಶಿರಿಗನ್ನಡ ಗ್ರಂಥಾಲಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸಮಾಜದಲ್ಲಿ ಕಂಡುಬರುತ್ತಿರುವ ವರದಕ್ಷಿಣೆ, ಉನ್ನತ ವರ್ಗದ ಗಂಡನೊಂದಿಗೆ ವಿವಾದ ಮುಂತಾದವುಗಳ ಮಹಿಳೆಯರ ಶಿಕ್ಷಣಕ್ಕೆ ವಿರುದ್ಧವಾಗಿದೆ”.[೮]

ಕಮಲಾಪುರದ ಕೇರಿಗಳ ಬೇಡ ಮಹಿಳೆಯರಲ್ಲಿ ಅನಕ್ಷರಸ್ಥರ ಸಂಖ್ಯೆ ಹೆಚ್ಚಾಗಿದೆ ಎಂದರೆ ತಪ್ಪಾಗಲಾರದು. ಸಾಮಾನ್ಯವಾಗಿ ಇಲ್ಲಿ ಹಿರಿಯ–ಕಿರಿಯರಲ್ಲಿ ಅನಕ್ಷರಸ್ಥರೇ ಹೆಚ್ಚು. ಚಿಕ್ಕ ಚಿಕ್ಕ ಮಕ್ಕಳು ಸಹ ಪ್ರಾಥಮಿಕ ಶಿಕ್ಷಣವನ್ನು ಪೂರೈಸದೆ ಬಾಲಕಾರ್ಮಿಕರಾಗಿ ಕೃಷಿಯೇತರ ಕೆಲಸಕ್ಕೆ ಹೋಗುತ್ತಿದ್ದಾರೆ. ಈಗಿನ ಸ್ಪರ್ಧಾತ್ಮಕ ಯುಗದಲ್ಲಿ ಮುಂದಿನ ತಲೆಮಾರುಗಳಾದ ಇಂದಿನ ಮಕ್ಕಳಿಗಾದರೂ ಶಿಕ್ಷಣ ಕಲಿಸಬೇಕೆಂಬ ವಿವೇಕ ಪೋಷಕರಿಗಾಗಲಿ ಶಿಕ್ಷಣ ಪಡೆಯಬೇಕೆಂಬ ಮನೋಭಾವ ಮಕ್ಕಳಿಗಾಗಲಿ ಇಲ್ಲದಿರುವುದನ್ನು ಕಾಣಬಹುದಾಗಿದೆ. ಈ ಕೇರಿಗಳ ಶೈಕ್ಷಣಿಕ ಮಟ್ಟ ಸಾಧಿಸಲು ಹಲವಾರು ದಶಕಗಳಾದರೂ ಸಾಧ್ಯವಿಲ್ಲವೆನ್ನಲಾಗುತ್ತದೆ. 131854

‘ಜ್ಞಾನಾರ್ಜನೆಗೆ ಪ್ರಜ್ಞಾವಂತಿಕೆಗೆ ಮೊದಲಾದವುಗಳಿಗೆ ಕೋಶ ಓದಬೇಕು ಇಲ್ಲವೇ ದೇಶ ಸುತ್ತಬೇಕು’. ಆದರೆ ಈ ಬೇಡ ನಾಯಕ ಕೇರಿಗಳಲ್ಲಿ ವಿಚಾರವಂತಿಕೆಯಾಗಲಿ ಪ್ರಾಪಂಚಿಕ ಜ್ಞಾನ ಇಲ್ಲದಿರುವುದರಿಂದ ಇದರ ಸಮಸ್ಯೆಗಳಿಗೆ ಸರಕಾರ ಏನೋ ಯೋಜನೆ ಕೈಗೊಂಡರೂ ಸಫಲವಾಗುವುದಿಲ್ಲ. ಕಮಲಾಪುರದ ೭ ಕೇರಿಗಳಿಲ್ಲದ ಮಹಿಳೆಯನ್ನು ಅಧ್ಯಯನ ಸಂದರ್ಭದಲ್ಲಿ ಅವರನ್ನು ಸಂದರ್ಶಿಸಿದಾಗ ಅವರ ಶಿಕ್ಷಣ ಮಟ್ಟ ೨ ತರಗತಿ ಹೆಚ್ಚೆಂದರೆ ೫ ತರಗತಿ ಮಾತ್ರ ಮಹಿಳೆಯರ ಶಿಕ್ಷಣ ಪಡೆದಿರುವುದು ಕಂಡುಬರುತ್ತದೆ. ಇತ್ತೀಚೆಗೆ ತಮ್ಮ ಮಕ್ಕಳು ಸ್ವಲ್ಪಮಟ್ಟಿಗೆ ಪದವಿಯನ್ನು ಪಡೆಯಲು ಪ್ರಯತ್ನಿಸುತ್ತಿರುವುದು ನೋಡಲು ಸಾಧ್ಯವಾಗಿದೆ. ಅದರಲ್ಲಿ ಮಹಿಳೆಗೆ ಹೆಣ್ಣು ಮಕ್ಕಳು ಕಡಿಮೆ. ಎಸ್.ಎಸ್.ಎಲ್.ಸಿ. ಆದ ನಂತರ ಹೆಣ್ಣು ಮಕ್ಕಳನ್ನು ಶಾಲೆ ಬಿಡಿಸುವುದು. ಮದುವೆ ಮಾಡುವುದು, ಮನೆಗೆಲಸ ಮಾಡುವುದು ಇಂತಹ ಕೆಲಸವನ್ನು ಪುರುಷರು ಮಾಡುತ್ತಿದ್ದಾರೆ. ಕೇರಿಗಳಲ್ಲಿ ಉನ್ನತ ಶಿಕ್ಷಣ ಪಡೆದ ಮಹಿಳೆಯರು ಬೆರಳಣಿಕೆಯಷ್ಟು ಇದ್ದಾರೆ. ಅದಲ್ಲದೆ ಇವರ ಮಕ್ಕಳಿಗೆ ಯಾರಾದರೂ ಶಿಕ್ಷಣ ಕೊಡಿಸು ಎಂದು ಹೇಳಿದರೆ ಓದಿ ಯಾರನ್ನು ಉದ್ಧಾರ ಮಾಡಬೇಕು ಎಷ್ಟು ಓದಿದರೆ ಕೆಲಸ ಸಿಗುವುದಿಲ್ಲ ಎಂಬ ತಪ್ಪು ಕಲ್ಪನೆ ಅವರಲ್ಲಿ ಆಳವಾಗಿ ಬೇರೂರಿದೆ. ಅದಲ್ಲದೆ ವಿಶೇಷವಾಗಿ ಮಹಿಳೆಯರಿಗೆ ಶಿಕ್ಷಣದ ವ್ಯವಸ್ಥೆ ಕನಸಿನ ಮಾತಾಗಿದೆ ಎಂದು ಕ್ಷೇತ್ರಕಾರ್ಯದ ಮೂಲಕ ತಿಳಿದುಬಂದಿದೆ.

‘ಪುರುಷನಿಂತ ಮಹಿಳೆ ದುರ್ಬಲಳು ಎನ್ನುವ ಅಸಮಾನ್ಯ ನೆಲೆಗಳು ಕುಟುಂಬದಿಂದ ಹಿಡಿದು, ಸಮಾಜದ ವಿವಿಧ ಸ್ಥಳಗಳಲ್ಲಿ ಬೆಸೆದುಕೊಂಡಿದೆ. ಇತಿಹಾಸದ ರಾಜಮನೆತನದ ಮತ್ತು ಉನ್ನತ ವರ್ಗದ ಮಹಿಳೆಯರಿಗೆ ಶಿಕ್ಷಣ ದೊರೆತಿದೆ ವಿನಃ ಸಾಮಾನ್ಯ ವರ್ಗದ ಮಹಿಳೆಯರಿಗೆ ಶಿಕ್ಷಣ ನೀಡಿರುವುದು ತುಂಬ ಕಡಿಮೆಯೇ. ಬೇಡರಲ್ಲಿ ಕೆಳವರ್ಗದವರು ಬದಕಲು

ದುಡಿಯಲೇಬೇಕಾದ ಅನಿವಾರ್ಯತೆಯಿಂದಾಗಿ ಶಿಕ್ಷಣದ ಬಗ್ಗೆ ಯಾಚಿಸುತ್ತಿಲ್ಲ' ಎಂಬುದು ಕ್ಷೇತ್ರಕಾರ್ಯದಿಂದ ತಿಳಿದುಬಂದ ಮಾಹಿಯಾಗಿದೆ.

ಕಮಲಾಪುರದಲ್ಲಿರುವ ಬೇಡ ಮಹಿಳೆಯರ ಶಿಕ್ಷಣ ವಂಚಿತರಾಗಿ ಕೆಲಸದಲ್ಲಿ ನಿರತರಾದಾಗ ಎಲೆ, ಅಡಿಕೆ, ತಂಬಾಕು, ನಸೆಪುಡಿ, ಮುಂತಾದವುಗಳಿಗೆ ಬಲಿಯಾಗಿದ್ದು ವ್ಯಸನಗಳಿಗೆ ಶಿಕ್ಷಣಕ್ಕೆ ಮುಕ್ತಾಯ ಹಾಡಿದ್ದಾರೆ. ಆದರೂ ಜೊತೆಗೆ ತಮ್ಮ ಮಕ್ಕಳನ್ನು ಬೇರೆ ಬೇರೆ ಕೆಲಸಕ್ಕೆ ಕಳುಹಿಸುತ್ತ ಶಿಕ್ಷಣದಿಂದ ಬೇರ್ಪಡಿಸುವ ಕೆಲಸ ಮಾಡುತ್ತಿದ್ದಾರೆ. ಅನಕ್ಷರತೆ, ಮೂಢನಂಬಿಕೆ, ಸಂಪ್ರದಾಯ ವಿಧಿ ವಿಧಾನಗಳು, ಆಚರಣೆಯ ಬಲೆಗೆ ಬಿದ್ದು ತಮ್ಮ ಮಕ್ಕಳ ಶಿಕ್ಷಣದ, ಕುರಿತು, ಆಲೋಚನೆ ಮಾಡುತ್ತಿಲ್ಲ. ಹೆಣ್ಣು ಮಕ್ಕಳು ಶಾಲೆ ಕಲಿತರೆ ಮನೆಯೂ ಮುಂದೆ ಬರುವುದಿಲ್ಲ ಮತ್ತು ಶಾಲೆ ಹೆಣ್ಣು ಶಾಲೆ ಕಲಿತರೆ ನಮಗೇನು ಲಾಭ. ಮನೆಯಿಂದ ಬೇಗ ಮದುವೆ ಮಾಡಿ ಕೈ ತೊಳಕೊಂಡರೆ ಸಾಕು ಎಂಬ ಪರಿಸ್ಥಿತಿ ನಿರ್ಮಾಣವಾಗಿದೆ. ಕೆಲವರು ಸರ್ಕಾರಿ ಶಾಲೆಗಳಲ್ಲಿ ೧೦ನೇ ತರಗತಿ ಅಥವಾ ೭ನೇ ತರಗತಿಯವರೆಗೆ ಓದಿಸಿ ಬಿಡಿಸಿ ಮದುವೆ ಮಾಡಿ ಕೊಟ್ಟಿರುವುದು ಕಂಡುಬರುತ್ತದೆ.

ಶಿಕ್ಷಣದ ಅವಶ್ಯಕತೆ ಅದರಲ್ಲೂ ಬೇಡ ಮಹಿಳೆಯರಿಗೆ ಅಗತ್ಯವಾಗಿದೆ. ಶಿಕ್ಷಣದ ಮೂಲಕ ಸಾಮಾಜಿಕ ಅರಿವನ್ನು ಪಡೆಯುವುದಲ್ಲದೆ ಆರ್ಥಿಕ ಸ್ವಾವಲಂಬನೆಯನ್ನು ಗಳಿಸಲು ದಾರಿಯಾಗಿದೆ. ಮಹಿಳೆಯರ ಸಾಕ್ಷರತೆ ಪ್ರಮಾಣ ಕಡಿಮೆ ಇರುವುದೇ ಅವರ ಅಭಿವೃದ್ಧಿಗೆ ದೊಡ್ಡ ಅಡ್ಡಗಾಲಾಗಿದೆ. ಮಹಿಳಾ ಸಾಕ್ಷರತೆಯನ್ನು ಕುಟುಂಬ ಮತ್ತು ಸಮಾಜದ ಅಭಿವೃದ್ಧಿ ದೃಷ್ಟಿಯಿಂದ ನೋಡುವುದರ ಜೊತೆಗೆ ಮಹಿಳೆಯರ ವ್ಯಕ್ತಿತ್ವ ವಿಕಸನಕ್ಕಾಗಿ ಪ್ರೋತ್ಸಾಹಿಸಬೇಕು. ಕಮಲಾಪುರ ಬೇಡ ಮಹಿಳೆಯರ ಹೆಣ್ಣು ಮಕ್ಕಳನ್ನು ಕೇವಲ ಅರ್ಧಕ್ಕೆ ಶಿಕ್ಷಣವನ್ನು ಬಿಡಿಸುವುದು ಹೆಚ್ಚಾಗಿದೆ. ಸರಕಾರ ಹಲವಾರು ಯೋಜನೆಗಳು ಇಲ್ಲಿ ಜಾರಿಗೆ ಬಂದಿದ್ದರೂ ಅದು ಇಲ್ಲಿ ಯಶಸ್ವಿಯಾಗುತ್ತಿಲ್ಲ.

"ಮಹಿಳೆಯರ ಶಿಕ್ಷಣವನ್ನು ಕೆಲವೊಂದಿಷ್ಟು ಮಹಿಳೆಯರನ್ನು ನೇರವಾಗಿ ವ್ಯಕ್ತಿ ಅಧ್ಯಯನವನ್ನು ಮಾಡುವಂತಾಯಿತು. ಅದರಲ್ಲಿ. ಕಮಲಾಪುರ ಬಂಡೇಕೇರಿಯ ಶಿವಗಂಗಮ್ಮ ಎಂಬ ಮಹಿಳೆ ವಯಸ್ಸು ೫೫, ಈ ಮಹಿಳೆಗೆ ಸಹಿ ಮಾಡಲು ಬರುತ್ತಿದೆ. ಈ ಒಂದು ವಿಷಯವನ್ನು ಆಧಾರಿಸಿ ಆ ಮಹಿಳೆಯ ಶಿಕ್ಷಣ ಮಟ್ಟವನ್ನು ಕೇಳಿದಾಗ ಆ ಮಹಿಳೆ ೪ನೇ ತರಗತಿ ವರೆಗೆ ಓದಿದ್ದೇನೆ. ಲೆಕ್ಕ ಮಾಡಲು, ಮನೆ ನಿರ್ವಾಹಣೆ ಮಾಡಲು ಬರುತ್ತಿದೆ ಎಂದೂ ಹೇಳಿದಾಗ ಶಿಕ್ಷಣವನ್ನು ಏಕೆ ಮುಂದುವರಿಸಲಿಲ್ಲ. ಎಂದಾಗ ಆ ಮಹಿಳೆಯಿಂದ ಬಂದ ಉತ್ತರ. ಆಗ ಮನೆಯ ಪರಿಸ್ಥಿತಿ ಸರಿ ಇರಲಿಲ್ಲ. ಅದರಲ್ಲೂ ನನಗೆ ಚಿಕ್ಕ ವಯಸ್ಸಿನಲ್ಲಿ ಮದುವೆಯನ್ನು ಮಾಡಿದ್ದರಿಂದ ನನಗೆ ಶಿಕ್ಷಣ ಪಡೆಯಲು ಆಗಲಿಲ್ಲ ಎಂದು ಹೇಳಿದಳು. ಆದರೆ ಅವರಿಗೆ

ಜನಿಸಿದ ಗಂಡು ಮಕ್ಕಳಿಗೆ ಶಿಕ್ಷಣ ಕೊಡಿಸಿದ್ದಾಳೆ. ಆದರೆ ಹೆಣ್ಣು ಮಗಳಿಗೆ ಶಿಕ್ಷಣ ನೀಡಲಾರದೇ ಏಕೆ ಎಂದು ಕೇಳಿದರೆ ಇವತ್ತಿನ ಕಾಲ ಸರಿಯಿಲ್ಲ ಅದಕ್ಕೆ ನಾನು ಶಿಕ್ಷಣ ಕೊಡಿಸಲಿಲ್ಲ ಎಂಬ ಮೂಢನಂಬಿಕೆ ಭಯ ಇರುವುದನ್ನು ಸಂದರ್ಶನದಲ್ಲಿ ಗುರುತಿಸಲಾಗಿದೆ.

ಹೀಗೆ ಕಮಲಾಪುರದ ಪ್ರತಿ ಕೇರಿಯಲ್ಲೂ ಮಹಿಳೆಯರ ಶಿಕ್ಷಣದ ಮಟ್ಟ ಕುಸಿಯುತ್ತಲೇ ಇದೆ. ಇದಕ್ಕೆ ಮೂಲ ಕಾರಣ ಪುರುಷ ಪ್ರಧಾನತೆ ಎಂಬ ವಿಚಾರ ಕಂಡುಬರುತ್ತಿದೆ. ಹೀಗೆ ಇಂತಹ ಹಲವಾರು ಅಂಶಗಳ ಪ್ರತಿ ಕೇರಿಯಲ್ಲಿ ಕಂಡುಬರುತ್ತಿವೆ.

ಪುರುಷ ಪ್ರಧಾನವಾದ ಈ ಸಮಾಜದಲ್ಲಿ ಸಮಾಜ ಕಟ್ಟುವ ಹಾಗೂ ಉಳಿಸುವ ಕಾರ್ಯದಲ್ಲಿ ಮಹಿಳೆಯರು ಅಗೋಚರವಾಗಿ ವಹಿಸುತ್ತಿರುವ ಪಾತ್ರವನ್ನು ಕಡೆಗಣಿಸುತ್ತಲೇ ಬರಲಾಗಿದೆ. ಆದರೆ ಈಗಿನ ಬದಲಾದ ದೃಷ್ಟಿಕೋನದಿಂದಾಗಿ ಹೆಣ್ಣು ಮಕ್ಕಳ ಶಿಕ್ಷಣ ಪ್ರಾಧಾನ್ಯತೆಯನ್ನು ಕೊಡಬೇಕೆಂದು ಅಂಶಕ್ಕೆ ಇನ್ನು ಚಾಲನೆ ದೊರೆಯಲು ವರ್ಷಗಳೇ ಬೇಕಾಗುತ್ತದೆ. ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡುವುದರಿಂದ ಹಲವಾರು ಅನುಕೂಲಗಳು ಆಗುತ್ತಿವೆ ಎಂಬುದನ್ನು ಯುನೆಸೇಪ್ ತನ್ನ ವರದಿಯಲ್ಲಿ ಪ್ರಸ್ತಾಪಿಸಿದೆ.

UNICEF: United National International Childrens emergence fund

ಮೂಲಭೂತ ಶಿಕ್ಷಣದ ವಿಸ್ತರಣೆ ಆರ್ಥಿಕ ಅಭಿವೃದ್ಧಿಯ ಮೇಲೆ ನೇರ ಪರಿಣಾಮ ಬೀಡುತ್ತದೆ ಎಂಬುದನ್ನು ಹತ್ತಾರು ವರ್ಷಗಳ ಸಂಶೋಧನೆ ತೋರಿಸಿಕೊಟ್ಟಿದೆ”.[೯]

“ಪ್ರಾಥಮಿಕ ಶಿಕ್ಷಣ ಪಡೆಯುವ, ಹೆಣ್ಣು ಮಕ್ಕಳ ಸಂಖ್ಯೆ ಹೆಚ್ಚಿದ್ದನ್ನು ಪ್ರತಿ ಮನೆಯ ಉತ್ಪನ್ನ ಹೆಚ್ಚುತ್ತದೆ. ಇದರ ಪರಿಣಾಮವಾಗಿ ರಾಷ್ಟ್ರದ ತಲವಾರು ಆದಾಯದಲ್ಲಿ ಏರಿಕೆ ಉಂಟಾಗುತ್ತದೆ.

ಹೆಣ್ಣು ಮಕ್ಕಳ ಹೆಚ್ಚಿನ ಸಂಖ್ಯೆಯಲ್ಲಿ ಶಿಕ್ಷಣ ಪಡೆದರೆ ಮುಂದಿನ ಪೀಳಿಗೆಯವರು ಹೆಚ್ಚಿನ ಸಂಖ್ಯೆಯಲ್ಲಿ ಸುಶಿಕ್ಷಿತರಾಗುತ್ತದೆ. ಇದರ ಪರಿಣಾಮ ಸುಶಿಕ್ಷಿತ ಸಮಾಜದ ನಿರ್ಮಾಣವಾಗುತ್ತಿವೆ.

ಶಿಕ್ಷಣ ಕೇವಲ ಶಾಲಾ ಕಲಿಕೆಗಷ್ಟೆ ಸೀಮಿತವಾಗದೆ ಆರೋಗ್ಯ, ನೈರ್ಮಲ್ಯಗಳ ಅರಿವು ಮೂಡಿಸಿ, ಆರೋಗ್ಯಕರ ಸಮಾಜ ನಿರ್ಮಾಣಕ್ಕೆ ನೆರವಾಗುತ್ತಿದೆ.

ಮನೆಯ ನಿರ್ವಹಣೆ, ಕೌಟುಂಬಿಕ ಗಾತ್ರ, ಸಂಪನ್ಮೂಲಗಳು ಇವರೆಡರ ನಡುವೆ ಸಮತೋಲನ ಕಾಪಾಡಿಕೊಂಡು ಬರಲು ಮತ್ತು ಜನಸಂಖ್ಯೆ ನಿಯಂತ್ರಣಕ್ಕೆ ಕಾರಣವಾಗುತ್ತಿದೆ.

ಶಿಕ್ಷಣ ಪಡೆದ ಮಹಿಳೆಯರ ಮಕ್ಕಳು ಅಜ್ಞಾನದಿಂದ ಉಂಟಾಗುವ ಅನಾರೋಗ್ಯಗಳಿಗೆ ತುತ್ತಾಗುವ ಸಾಧ್ಯತೆಗಳ ಕಡಿಮೆಯಾಗುತ್ತವೆ.

ಮಹಿಳೆಯರ ಶಿಕ್ಷಣದ ಜಾಗೃತಿ ಮೂಡಿಸಲು ಯೂನಿಸೇಪ್ ಹಲವಾರು ವಿದ್ಯಾಕ್ರಮಗಳ ಹಾಕಿಕೊಟ್ಟರು. ಸಂಪೂರ್ಣವಾಗಿ ಮಹಿಳೆಯರ ಶಿಕ್ಷಣವನ್ನು ನೀಡಲು ಇನ್ನೂ ಸಾಧ್ಯವಾಗುತ್ತಿಲ್ಲ”.[೧೦]

ಕಾರ್ಯಕ್ಷೇತ್ರದ ಸಂದರ್ಭದಲ್ಲಿ ಕಮಲಾಪುರದಲ್ಲಿ ಕಂಡುಬರುವ ಪ್ರತಿ ಕೇರಿಯ ೪೦ ಮಹಿಳಾ ಕುಟುಂಬಗಳ ಸಂದರ್ಶನದಲ್ಲಿ ಮಾಹಿತಿಯ ಆಧಾರದ ಮೇಲೆ ಈ ಕೋಷ್ಟಕವನ್ನು ರಚಿಸಲಾಗಿದೆ.

**ಕಮಲಾಪುರದ ಬೇಡ ವಯಸ್ಕ ಮಹಿಳೆಯರ ಶಿಕ್ಷಣ ಮಟ್ಟ**

| ಕ್ರ ಸಂ. | ಕೇರಿಯ ಹೆಸರು | ಸಂದರ್ಶಿಸಿದ ಕುಟುಂಬಗಳ ಸಂಖ್ಯೆ | ೭ನೇ ತರಗತಿ | ೧೦ನೇ ತರಗತಿ | ಪಿ.ಯು.ಸಿ. | ಬಿ.ಎ. | ಎಂ.ಎ |
|---|---|---|---|---|---|---|---|
| ೧. | ತಿಮ್ಮನಾಥಕೇರಿ | ೪೦ | ೫ | ೦೩ | ೦೧ | ೦೨ | ೦೨ |
| ೨. | ಮನ್ಮಥಕೇರಿ | ೪೦ | ೦೪ | ೦೪ | ೦೩ | ೧ | – |
| ೩. | ಚೌಡಿಕೇರಿ | ೪೦ | ೦೫ | ೦೪ | ೦೯ | ೦೩ | – |
| ೪. | ಬಂಡಿಕೇರಿ | ೪೦ | ೦೪ | ೦೨ | – | – | – |
| ೫. | ಹಿರೆಕೇರಿ | ೪೦ | ೦೩ | ೦೪ | ೦೨ | ೦೧ | – |
| ೬. | ಗೋನಾಳಕೇರಿ | ೪೦ | ೦೫ | ೦೧ | ೦೩ | ೦೨ | ೦೧ |
| ೭. | ತಳವಾರ ಕೇರಿ | ೪೦ | ೦೪ | ೦೧ | – | – | – |

ಸಂದರ್ಶನದಲ್ಲಿ ಪ್ರತಿ ಕೇರಿ ೪೦ ಮಹಿಳೆಯರನ್ನು ಭೇಟಿಯಾಗಿ ಕಂಡುಬಂದ ಅಂಶವೆಂದರೆ ಅದು ಹೆಚ್ಚಾಗಿ ಪ್ರತಿ ಕೇರಿಗಳಲ್ಲಿನ ಮಹಿಳೆಯರ ೫ನೇ ತರಗತಿ ೧೦ನೇ ತರಗತಿ ಮುಗಿಸಿ ಕೃಷಿ ಕೆಲಸದಲ್ಲಿ ತೊಡಗಿ ಜೀವನ ಸಾಗಿಸುತ್ತ ಬಂದಿರುವುದಾಗಿದೆ. ಇವರು ಚಿಕ್ಕ ವಯಸ್ಸಿನಲ್ಲಿ ಮದುವೆ ಮಾಡಿರುವುದು. ಶಿಕ್ಷಣಕ್ಕೆ ಮುಕ್ತಾಯ ಹಾಡಿರುವುದೇ ಕಾರಣವಾಗಿದೆ. ಇಲ್ಲಿ ೭ ಕೇರಿಗಳಲ್ಲಿ ಎಂ.ಎ. ಬಿ.ಎ. ಪದವಿದದರೆ ಪಡೆದಿರುವ ಮಹಿಳೆರೆಂದರೆ ಅದು ತಿಮ್ಮನಾಥಕೇರಿಯಲ್ಲಿ ಇನ್ನು ಇಂಜಿಯರಿಂಗ್ ಮಾಡಿರುವುದು ಮಹಿಳೆಯರ ಅದು ಗೋನಾಳ ಕೇರಿಯಲ್ಲಿ ಮಾತ್ರ ಎಂಬುದು ಸಂದರ್ಶನ ಸಮಯದಲ್ಲಿ ದೊರೆತ ಮಾಹಿತಿ.

ಈ ಮೇಲಿನ ಮಾಹಿತಿಯ ಆಧಾರದ ಮೇಲೆ ಇನ್ನು ಕೆಲವು ಮಹಿಳೆಯರಿಗೆ ಶಿಕ್ಷಣದ ಬಾಗಿಲು ತೆರೆದಿದ್ದರೂ ಒಳಗಡೆ ಹೋಗಲಾರದ ಪರಿಸ್ಥಿತಿ ಇವರಲ್ಲಿದೆ.

**೩.೧೦. ರಾಜಕೀಯ ಮತ್ತು ಮಹಿಳೆ**

"ಅಭಿವೃದ್ಧಿಯ ನೆಲೆಯಲ್ಲಿ ಬೇಡ ಮಹಿಳೆಯರನ್ನು ಕೇಂದ್ರೀಕರಿಸಿದಾಗ ನಾನು ಸಮೀಕ್ಷೆ ಮಾಡಿದ ಬರಹಗಳಲ್ಲಿ ಕೆಲವೊಂದು ಲೇಖನಗಳು ಮಹಿಳೆಯರನ್ನು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಕೌಟುಂಬಿಕ, ಕೃಷಿ ಕೃಷಿಯೇತರ ಚಟುವಟಿಕೆಗಳನ್ನು ಅಧ್ಯಯನ ಮಾಡಲಾಗಿದೆ.

ಕಾನೂನಿನ ಶಿಸ್ತಿನಲ್ಲಿ ಬೇಡ ಮಹಿಳೆಯರ ಅಧ್ಯಯನ ಬಹಳ ಮುಖ್ಯವಾದ ವಿಚಾರವಾಗಿದೆ. ಹಕ್ಕುಗಳು ಮತ್ತು ಕಾನೂನುಗಳು ಬೇರೆಯಾದರೂ ಸಂವಿಧಾನವು ಮಹಿಳೆಯರಿಗೂ ಸಮಾನತೆಯ ಹಕ್ಕು, ಶೈಕ್ಷಣಿಕ ಹಕ್ಕು, ಸ್ವಾತಂತ್ರ್ಯದ ಹಕ್ಕು, ಆಸ್ತಿಯ ಹಕ್ಕು, ಮತದಾನದ ಹಕ್ಕು, ಚುನಾವಣೆಯಲ್ಲಿ ಸ್ಪರ್ಧಿಸುವ ಹಕ್ಕು ಶೋಷಣೆ ವಿರುದ್ಧ ಹಕ್ಕುಗಳನ್ನು ನೀಡಿದೆ. ಸಂವಿಧಾನ ೩೨ನೇ ವಿಧಿಯ ಪ್ರಕಾರ ಸಮಾನತೆಯ ಹಕ್ಕು ಪುರುಷನಿಗೆ ಸಮನಾಗಿ ಮಹಿಳೆಯ ರಾಜಕೀಯ ರಂಗದಲ್ಲಿ ಭಾಗವಹಿಸಲು ಎಲ್ಲ ರೀತಿಯಿಂದ ಅವಕಾಶಗಳನ್ನು ಹೊಂದಿದ್ದಾಳೆ. ಅಭಿವೃದ್ಧಿ ಹೊಂದಿದ ಹಕ್ಕು ಮೂಲಭೂತ ಹಕ್ಕು ಆಗಿದ್ದರೂ ಮಹಿಳೆಯರಿಗೆ ಇನ್ನು ತಲುಪುತ್ತಿಲ್ಲ. ಉದಾಹರಣೆಗೆ, ಅರ್ಥಶಾಸ್ತ್ರದ ಪರಿಭಾಷೆಯಲ್ಲಿ ತಮ್ಮ ಹೊಲಗದ್ದೆಗಳಲ್ಲಿ ದುಡಿಯುವ ಮಹಿಳೆಯರುಇ, ಮನೆಯಲ್ಲಿ ಪಶುಸಂಗೋಪನೆ ಮಾಡುವ ಮೂಲಕ ಕುಟುಂಬದ ಆದಾಯ ಹೆಚ್ಚಿಸುವಲ್ಲಿ ಮಹಿಳೆಯರು ಕಾರಣರಾದರೂ ಅವರು ನಿರುತ್ಪಾದಕರು. ಏಕೆಂದರೆ ಅವರು ಮಾಡುವ ಈ ಯಾವ ಕೆಲಸಗಳಿಗೂ ಸಂಬಳ ನಿಗದಿ ಆಗಿರುವುದಿಲ್ಲ".[೧೧]

ನಾಯಕರ ಪಂಚಾಯಿತಿಯಲ್ಲಿ ಮಹಿಳೆಯರಿಗೆ ಅವಕಾಶವಿಲ್ಲ. ಪ್ರತಿ ಕೇರಿಯಲ್ಲಿ ನ್ಯಾಯ ಪಂಚಾಯಿತಿ ಕಟ್ಟೆಗಳಿವೆ. ಇವು ಪ್ರತಿಯೊಂದನ್ನು ಕೋರ್ಟ್ ಎಂಬ ನಂಬಿಕೆ ಇವರಲ್ಲಿದೆ. ಕೇರಿಯಲ್ಲಿ ಯಾವುದೇ ಸಮಸ್ಯೆ ಉಂಟಾದರೂ ಮೊದಲು ಕೇರಿಯ ಪಂಚಾಯಿತಿ ಆದ ನಂತರ ಅದು ಮುಂದಿನ ತೀರ್ಮಾನವಾಗುತ್ತವೆ. ಸುಮಾರು ವರ್ಷಗಳಿಂದ ಈ ಪಂಚಾಯಿತಿ ಕಟ್ಟೆಗಳ ಹಾಗೆಯೇ ನ್ಯಾಯ ತೀರ್ಮಾನವನ್ನು ಉಳಿಸಿಕೊಂಡು ಬಂದಿವೆ. ಇದರಲ್ಲಿ ಪಂಚಮರು ನ್ಯಾಯಮೂರ್ತಿಗಳಂತೆ ಯಾವುದೇ ಕಾರಣಕ್ಕೂ ಅವರ ಮಾತನ್ನು ಮೀರುವಂತಿಲ್ಲ ಒಂದು ವೇಳೆ ಅಂತಹ ವಿರುದ್ಧವಾದ ವಾದಗಳು ನಡೆದರೆ ಕೇರಿಯಿಂದ ಅವರನ್ನು ಹೊರಗಡೆ ಇಡಲಾಗುವುದು. ಅದರಲ್ಲಿ ಮುಖ್ಯವಾಗಿ ಅಂತರ್‌ಜಾತಿ ವಿವಾಹಕ್ಕೆ ಆಸ್ಪದವಿಲ್ಲ. ಕುಟುಂಬ ಜಗಳವನ್ನು ಕೋರ್ಟ್‌ಗೆ ತೆಗೆದುಕೊಂಡು ಹೋಗುವಂತಿಲ್ಲ. ಮನೆ ಒಡೆಯುವುದು, ಪಾಲು ಕೇಳುವುದು, ಸಾಲದ ಜಗಳಗಳಿಗೆ ಇದೇ ಕೋರ್ಟಾಗಿ ಕೆಲಸವನ್ನು ನಿರ್ವಹಿಸುತ್ತದೆ. ಇದರಲ್ಲಿ ವಿಶೇಷವಾಗಿ ಬೇಡ ಮಹಿಳೆಯನ್ನು ನೋಡುವುದಾದರೆ ಪಂಚಾಯಿತಿ ನಡೆಯುವ ಸಂದರ್ಭದಲ್ಲಿ ಯಾವುದೇ ಕಾರಣಕ್ಕೂ ಮಹಿಳೆಯಗೇ ಆಸ್ಪದವಿಲ್ಲ. ಹಾಗಿದ್ದರೂ ಮಹಿಳೆ ಚಾವಡಿ ಕಟ್ಟೆಯಿಂದ ದೂರ ನಿಲ್ಲಬೇಕು ಮತ್ತು ಸಮಸ್ಯೆ ಏನೇ ಇದ್ದರೂ ಹೊರಗಡೆ ನಿಂತು ಕೇಳುವ ಪದ್ಧತಿ ಇನ್ನು ಜೀವಂತವಾಗಿದೆ. ಪಂಚಾಯಿತಿ ನಡೆಯುವುದಕ್ಕಿಂತ ಮುಂಚೆ ಪ್ರತಿ ಮನೆಗೆ ಹೋಗಿ ಒಬ್ಬ ವ್ಯಕ್ತಿಯಿಂದ ಮಾಹಿತಿ ತಿಳಿಸುತ್ತೇನೆ ಆದರೆ ಯಾವುದೆ ಕಾರಣಕ್ಕೂ ಮಹಿಳೆಯನ್ನು ಕರೆಯುವಂತಿಲ್ಲ. ಮನೆಯ ಪುರುಷನನ್ನು ಮಾತ್ರ ನ್ಯಾಯ ಪಂಚಾಯಿತಿಗೆ ಕರೆಯುವ ಸಂಪ್ರದಾಯ ಇದೆ.

ಚಾವಡಿ ಕಟ್ಟೆಯಲ್ಲಿ ಗುರಿಕಾರ ಹಾಗೂ ಪಂಚಮರ ಜೊತೆ ಮಹಿಳೆಯರು ಸಮನಾಗಿ ಕುಳಿತುಕೊಳ್ಳುವ ಮಾತು ದೂರವೇ ಉಳಿದಿದೆ. ಮಹಿಳೆಯರು ದೂರಿದಿಂದಲೇ ಪಂಚಾಯಿತಿಯ ಕಾರ್ಯ ಕಲಾಪಗಳನ್ನು ವೀಕ್ಷಿಸಬೇಕು. ಇದರಲ್ಲಿ ಹೀರೆಕೇರಿ ನ್ಯಾಯ ಪಂಚಾಯಿತಿ ಏಳು ಕೇರಿ ನ್ಯಾಯ ಸಮುದಾಯದ ಮೇಲ್ಮನವಿ ನ್ಯಾಯಾಲಯವಾಗಿದೆ. ಕಮಲಾಪುರದ ೭ ಕೇರಿ ಬೇಡ ಮಹಿಳೆಯರಿಗೆ ರಾಜಕೀಯದ ಅರಿವೇ ಇಲ್ಲ. ರಾಜಕೀಯದ ಅಥವಾ ಸಮುದಾಯದ ಅಭಿವೃದ್ಧಿ ಹೇಗೆ ಮಾಡಬಹುದು ಎಂಬ ಮಾಹಿತಿಯ ಕೊರತೆ, ಜೊತೆಗೆ ರಾಜಕೀಯವೆಂದರೆ ಭಯ ನಮಗೇಕೆ ೩ ಬೇಕು. ಅದು ಪುರುಷನಿಗೆ ಮಾತ್ರ ಸಾಧ್ಯ. ಇದರಲ್ಲಿ ಪುರುಷರು ಸಹ ಅವರನ್ನು ರಾಜಕೀಯದಿಂದ ದೂರ ಉಳಿಯುವಂತೆ ಮಾಡಿದ್ದಾರೆ. ಮತದಾನದ ದಿನ ಬಂದರೂ ಮಹಿಳೆಯರಿಗೆ ಅವರಿಗೆ ಬೇಕಾದ ನಾಯಕನನ್ನು ಅಥವಾ ನಾಯಕಿಯನ್ನು ಆಯ್ಕೆ ಮಾಡುವಂತಿಲ್ಲ. ಮನೆಯಲ್ಲಿ ಪುರುಷ ಯಾರಿಗೆ ಮತದಾನ ಮಾಡು ಎಂದೂ ಹೇಳುತ್ತಾನೋ ಅವರಿಗೆ ಚಾಚು ತಪ್ಪದೇ ಮತದಾನವನ್ನು ಈ ಕೇರಿಯ ಬೇಡ ಮಹಿಳೆಯರು ಹಾಕುತ್ತಾರೆ. ಮೀಸಲಾತಿ ಕಲ್ಪಿಸಿದರೂ ಯಾವುದೇ ಕಾರಣಕ್ಕೂ ಬೇಡ ಮಹಿಳೆಯರು ರಾಜಕೀಯದಲ್ಲಿ ಪ್ರವೇಶ ಮಾಡುವ ಮನಸ್ಸನ್ನು ಮಾಡುತ್ತಿಲ್ಲ. ಕೆಲವು ಮಹಿಳೆಯರು ಮನಸ್ಸು ಮಾಡಿದರೂ ಅದಕ್ಕೆ ತುಂಬಾ ದುಡ್ಡು ಬೇಕಾಗುತ್ತದೆ ಎಂಬುದನ್ನು ಕ್ಷೇತ್ರಕಾರ್ಯದಲ್ಲಿ ಕಂಡುಕೊಳ್ಳಲಾಗಿದೆ. ರಾಜಕೀಯದಲ್ಲಿ ಪ್ರವೇಶ ಮಾಡಿದ ಮಹಿಳೆಯರನ್ನು ಭೇಟಿಯಾಗಿ ಸಂದರ್ಶಿಸಿದಾಗ ಬಸಮ್ಮ ಎಂಬ ಮಹಿಳೆ ಪಟ್ಟಣ ಪಂಚಾಯಿತಿ ಪುರಸಭೆ ಮಾಜಿ ಅಧ್ಯಕ್ಷೆ ಆಗಿದ್ದ ಇವರು ಎಸ್.ಎಸ್.ಎಲ್.ಸಿ. ಮಾಡಿ ಕಳೆದ ಸುಮಾರು ೧೫-೨೦ ವರ್ಷಗಳಿಂದ ರಾಜಕೀಯ ವಲಯದಲ್ಲಿ ಗುರುತಿಸಿಕೊಂಡಿದ್ದಾರೆ. ಇವರ ಸತತ ನಿರಂತರವಾಗಿ ೪ ಸಾರಿ ವಿಜಯಶಾಲಿಯಾಗಿದ್ದು ರಾಜಕೀಯದಲ್ಲಿ ಪಳಗಿದ ಅನುಭವ ಇದೆ. ಪುರುಷನ ಸರಿಸಮಾನ ಮಾತನಾಡುವ ಕೌಶಲ್ಯವಿದ್ದು, ಇವರನ್ನು ಹೊರತುಪಡಿಸಿದರೆ ಅಕ್ಕಮ್ಮ, ಓಬಮ್ಮನವರನ್ನು ಬಿಟ್ಟು ರಾಜಕೀಯದಲ್ಲಿ ಇದುವರೆಗೂ ಯಾವುದೇ ಮಹಿಳೆಯರು ಪ್ರವೇಶ ಮಾಡಿಲ್ಲವಿರುವುದು ಕಂಡುಬರುತ್ತದೆ. ಇದಕ್ಕೆ ಕಾರಣ ಈ ಸಮುದಾಯದಲ್ಲಿ ಮಹಿಳೆಯರಲ್ಲಿ ಸ್ಪರ್ಧಾತ್ಮಕ ಮನೋಭಾವನೆ ಕೊರತೆಯಿಂದಾಗಿ ರಾಜಕೀಯದ ಅರಿವಿಲ್ಲದಿರುವುದರಿಂದ ಬೇಡ ಮಹಿಳೆಯರಿಗೆ ಆಗಿರುವ ಅನಾನುಕೂಲಗಳು.

- ಸರಿಯಾದ ಮನೆಯಿಲ್ಲದಿರುವುದು
- ಮನೆಯ ಮುಂದೆ ಚರಂಡಿ ವ್ಯವಸ್ಥೆ
- ಮನೆ ಕಟ್ಟಿಕೊಳ್ಳಲು ಜಾಗದ ಕೊರತೆ
- ಗುಡಿಸಲುಗಳಲ್ಲಿನ ಜೀವನ
- ಸರಕಾರದ ಯೋಜನೆಗಳ ಮುಟ್ಟದಿರುವುದು
- ತಾತ್ಕಾಲಿಕ ನೌಕರರ ಅಡ್ಡಗಾಲು
- ಹಣ ನೀಡಿ ಕೆಲಸ ಮಾಡಿಸುವುದು.
- ಮನೆಗೆ ಸಂಬಂಧ ಪಟ್ಟ ಸರಿಯಾದ ದಾಖಲೆ ಇಲ್ಲದಿರುವುದು.

ಏಳು ಕೇರಿಗಳಲ್ಲೂ ನ್ಯಾಯ ಪಂಚಾಯಿತಿ ಚಾವಡಿಗಳಿವೆ. ಇವುಗಳನ್ನು ಆಧಾರವಾಗಿಟ್ಟು ಕೊಂಡು ಈ ಸಮುದಾಯದಲ್ಲಿ ಒಗ್ಗಟ್ಟಿನ ಬಾವನೆಯನ್ನು ರಾಜಕೀಯ ವ್ಯಕ್ತಿಗಳ ಬಳಸಿಕೊಂಡು ಪ್ರತಿ ಚಾವಡಿಯಲ್ಲಿ ಟಿ.ವಿ.ಗಳನ್ನು ರಾಜಕೀಯ ವ್ಯಕ್ತಿಗಳು ನೀಡಿರುವುದರಿಂದ ದುಡಿಮೆ ವಯಸ್ಸಿನ ಪುರುಷರೆಲ್ಲಾ ಸೇರಿ ಟಿ.ವಿ. ಮುಂದೆ ಕಾಲ ಕಳೆಯುತ್ತಾ ಕುಳಿತು ಮಲಗಿ ಚಾನೆಲ್‌ಗಳನ್ನು ಬದಲಾಯಿಸುತ್ತಿರುವುದು ಕ್ಷೇತ್ರಾಧ್ಯಯನದಿಂದ ತಿಳಿಯಲು ಸಹಾಯಕವಾಯಿತು. ಇಲ್ಲಿ ಮಹಿಳೆಯರು ಕೃಷಿ ಕೂಲಿ ಮಾಡಿ ಬಂದು ಅವರಿಗೆ ಆಹಾರ(ಅಡುಗೆ) ತಯಾರಿಸುವ ಸ್ಥಿತಿ ತುಂಬಾ ನೋವುಂಟು ಮಾಡುವಂತಹುದ್ದು. ಈ ವಿಚಾರಗಳನ್ನು ಗಮನಿಸಿ ನೋಡುವುದಾದರೆ ಅವರಿಗೆ ರಾಜಕೀಯದ ಪ್ರಜ್ಞೆಯಾಗಲಿ ಅಥವಾ ಅರಿವಿನ ಬಗ್ಗೆ ತಿಳಿಯಲು ಹೇಗೆ ಸಾಧ್ಯವಾದೀತು? ಎಂಬುದನ್ನು ಗಮನಿಸಬಹುದಾಗಿದೆ.

**ಕಮಲಾಪುರದ ಬೇಡ ಮಹಿಳೆಯರ ರಾಜಕೀಯದ ವಿವರಣೆ**

| ವರ್ಷ | ಆಯ್ಕೆಯಾದವರು | ಎಷ್ಟು ಬಾರಿ |
|---|---|---|
| ೧೯೮೩ | ಶ್ರೀಮತಿ ಓಬಮ್ಮ | ೧ ಬಾರಿ |
| | ಶ್ರೀಮತಿ ಬಸಮ್ಮ | ೨ ಬಾರಿ |
| | ಶ್ರೀಮತಿ ಅಕ್ಕಮ್ಮ | ೧ ಬಾರಿ |
| ೧೯೯೦ | ಶ್ರೀಮತಿ ಬಸಮ್ಮ | ೧ ಬಾರಿ |
| | ಶ್ರೀಮತಿ ಮಾರಕ್ಕ | ೧ ಬಾರಿ |
| ೧೯೯೬ | ಶ್ರೀಮತಿ ಶೇಖಮ್ಮ | ೧ ಬಾರಿ |
| | ಶ್ರೀಮತಿ ಸತ್ಯಮ್ಮ | ೧ ಬಾರಿ |
| ೨೦೦೩ | ಶ್ರೀಮತಿ ಬಸಮ್ಮ | ೧ ಬಾರಿ |

ಈ ಮೇಲಿನ ಮಾಹಿತಿ ಆಧಾರದ ಮೇಲೆ ೧೯೮೩ರಿಂದ ೨೦೦೩ರ ನಂತರ ಯಾವುದೇ ಬೇಡ ಮಹಿಳೆ ರಾಜಕೀಯ ಪ್ರವೇಶ ಮಾಡಲು ಮುಂದಾಗುತ್ತಿಲ್ಲ ಎಂಬ ಅಂಶ ಕಂಡುಬಂದಿದೆ.

ಕಮಲಾಪುರದ ಬೇಡ ಮಹಿಳೆಯರಿಗೆ ಹಾಕಿರುವ ಕೆಲವೊಂದು ಕಾಯಿದೆಗಳು: ಇವುಗಳನ್ನು ಯಾವುದೆ ಸಂದರ್ಭದಲ್ಲಿ ಚಾಚು ತಪ್ಪುವಂತಿಲ್ಲ. ಇವುಗಳನ್ನು ಪಾಲಿಸಲೇಬೇಕು. ಈ ಸಾಮಾಜಿಕ ಕಟ್ಟಳೆಯಲ್ಲಿ ನಿರ್ಮಿಸಿದರು ಆಯಾ ಕೇರಿಯ ನ್ಯಾಯ ಪಂಚಮರ ಈ ಅಂಶಗಳೆಂದರೆ

- ವಿಧವೆ ಮಹಿಳೆ ಪುನಃ ಮದುವೆ ಆಗುವಂತಿಲ್ಲ. ಅಂತಹ ಸಂದರ್ಭಗಳು ಇದುವರೆಗೂ ನಡೆದಿಲ್ಲ
- ವಿಧವೆ ಮಹಿಳೆ ದೇವಸ್ಥಾನ ಮದುವೆ ಕಾರ್ಯಗಳಲ್ಲಿ ಸ್ವತಂತ್ರವಾಗಿ ಭಾಗವಹಿಸುವಂತಿಲ್ಲ
- ಅಂತರ್‌ಜಾತಿ ವಿವಾಹಕ್ಕೆ ಆಸ್ಪದವಿಲ್ಲ. ಮಹಿಳೆಗೆ ಆಯ್ಕೆ ಅವಕಾಶ ಕನಸಿನ ಮಾತಾಗಿದೆ.
- ತಮ್ಮ ಜಾತಿಯ ಹುಡುಗಿ ಋತುಮತಿಯಾದರೆ ೯, ೧೧ ದಿವಸಗಳವರೆಗೆ ಹೊರಗಡೆ ಬರುವಂತಿಲ್ಲ.

ಹೀಗೆ ಮಹಿಳೆಯರ ಮೇಲೆ ಹಲವಾರು ಕಟ್ಟುಪಾಡುಗಳು ಹಾಕಿದ್ದರಿಂದ ರಾಜಕೀಯದಿಂದ ತುಂಬಾನೇ ದೂರ ಉಳಿದಿದ್ದಾರೆ. ಇಲ್ಲಿ ಮಹಿಳೆ ಕೇವಲ ಪುರುಷನ ಅಡಿಯಾಗಿ ಇರಬೇಕಾದ ಸ್ಥಿತಿಯಾಗಿದೆ. ಇನ್ನು ಕೆಲವು ಶಿಕ್ಷಣ ಪಡೆದ ಮಹಿಳೆಯರಂತೂ ಕೆಲವೊಂದು ಪಾರ್ಟ್ ಟೈಮ್ ಕೆಲಸ ಮಾಡಿಕೊಂಡು ಮನೆಗೆ ಬಂದು ಟಿ.ವಿ. ಮುಂದೆ ಕುಳಿತು ಕಾಲ ಕಳೆಯುವುದೇ ಇವರ ಕೆಲಸವಾಗಿದೆ. ಕ್ಷೇತ್ರ ಕಾರ್ಯದಲ್ಲಿ ಇವರನ್ನು ಸಂದರ್ಶಿಸಿದಾಗ ಕಮಲಾಪುರದಲ್ಲಿ ಮಹಿಳಾ ಮೀಸಲಾತಿ ಇದೆ ನೀವು ರಾಜಕೀಯದಲ್ಲಿ ಬನ್ನಿ ಎಂದೂ ಕೇಳಿದಾಗ ನಮಗೇಕೆ ಬೇಕು ಈ ರಾಜಕೀಯ ಅದೇನೇದ್ದರೂ ಹಣವಂತರಿಗೆ ಮತ್ತು ರಾಜಕೀಯ ಲಿಂಕ್ ಇರೋರೆಗೆ ಮಾತ್ರ ಸಾಧ್ಯ ಎಂಬ ಮಾತನ್ನು ಹೇಳಲಾಗಿದೆ. ಈ ಮಹಿಳೆಯರಲ್ಲಿ ಧೈರ್ಯ, ಆಸಕ್ತಿ, ಶಿಕ್ಷಣ ಮನೋಭಾವ ಕೊರತೆ ಇರುವುದನ್ನು ಇಲ್ಲಿ ಗುರುತಿಸಬಹುದಾಗಿದೆ. ಇತ್ತೀಚೆಗೆ ಕೆಲವೊಂದು ಕಮಲಾಪುರದ ಬೇಡ ಮಹಿಳೆಯರನ್ನು ಅವಲೋಕಿಸಿದಾಗ ಅದರಲ್ಲೂ ವಿಶೇಷವಾಗಿ ಶಿಕ್ಷಣ ಪಡೆಯುತ್ತಿರುವ ಮಹಿಳೆಯರು ಪಾರ್ಟ್‌ಟೈಮ್ ಕೆಲಸ ಮಾಡುತ್ತಿದ್ದಾರೆ. ಇದರಲ್ಲಿ ಮಾಡುತ್ತಿರುವ ಧೈರ್ಯವನ್ನು ರಾಜಕೀಯದಲ್ಲಿ ಏಕೆ ಮಾಡುತ್ತಿಲ್ಲ ಎಂಬ ಅಂಶ ನನಗೆ ಪ್ರಶ್ನೆಯುಂಟು ಮಾಡಿದೆ. ಇದರಲ್ಲಿ ಕೆಲವೊಂದು ಪುರುಷರು ಅದರಲ್ಲೂ ನೌಕರಿ ಪಡೆದಂತವರ, ಪದವಿಯನ್ನು ಪಡೆದಂತಹವರು ತಾವು ಕೂಡಿ ರಾಜಕೀಯ ಪ್ರವೇಶ ಮಾಡುತ್ತಿಲ್ಲ. ತಮ್ಮ ಮಹಿಳೆಯರಿಗೆ ಪ್ರವೇಶ ಮಾಡಲು ಅನುವು ಮಾಡಿಕೊಡುತ್ತಿಲ್ಲ ಎಂಬುದು ವಿಷಾಧನೀಯ ಸಂಗತಿಯಾಗಿದೆ. ರಾಜಕೀಯ ವ್ಯಕ್ತಿಗಳು ಕಮಲಾಪುರದ ಪಟ್ಟಣಕ್ಕೆ ೭ ಕೇರಿಗಳಲ್ಲಿ ಬಂದು ಹೋಗುವ

ಸಂಪ್ರದಾಯವಿದೆ. ಅದರಲ್ಲಿ ಎಂ.ಎಲ್.ಎ.ಗಳು ಹೆಚ್ಚು. ಪ್ರತಿ ಕೇರಿಗೆ ಎಂ.ಎಲ್.ಎ. ಭೇಟಿ ನೀಡಿದಾಗ ಅಲ್ಲಿ ಪುರುಷರ ಸಮಸ್ಯೆಗಳನ್ನು ಕೇಳುತ್ತಾರೆ ವಿನಹಃ ಮಹಿಳೆಯರು ಬಂದು ತಮ್ಮ ಸಮಸ್ಯೆಗಳನ್ನು ಹೇಳಲಾರದ ಪರಿಸ್ಥಿತಿ ನಿರ್ಮಾಣವಾಗಿದೆ. ಕೇವಲ ಪುರುಷರು ಅಲ್ಲಿಗೆ ಬಂದು ಸಮಸ್ಯೆ ಇರಲಿ ಇಲ್ಲದಿರಲಿ ಬಂದಂತಹ ಎಂ.ಎಲ್.ಎ.ಗಳಿಗೆ ಹಾರ ಹಾಕಿ ಎಳೆ ನೀರು ತಂದು ಕೊಟ್ಟು, ಜೈಕಾರ ಹಾಕಿ ಅವರಿಂದ ಒಳನೆರವು ಪಡೆಯುತ್ತಾರೆಯೇ ವಿನಃ ಮಹಿಳಾ ಸಮುದಾಯದ ಬಗ್ಗೆ ಯಾವುದೇ ಪ್ರಶ್ನೆಗಳನ್ನು ಕೇಳುವಂತಿಲ್ಲ. ಒಂದು ವೇಳೆ ಕೇಳಿದರೆ ಆ ಮಹಿಳೆಯನ್ನು ನಿಂದಿಸುತ್ತಾ ಅವಳು ಯಾವ ಕುಟುಂಬದವಳು, ಅವಳ ಗಂಡ ಸರಿ ಇಲ್ಲ, ಅವಳಿಗೆ ಸೊಕ್ಕು ಎಂದು ಹೇಳುತ್ತಾರೆ.

ಒಟ್ಟಾರೆಯಾಗಿ ರಾಜಕೀಯ ವಿಚಾರವನ್ನು ಇಟ್ಟುಕೊಂಡು ಪ್ರತಿ ಕೇರಿಯ ೪೦ ಬೇಡ ಕುಟುಂಬವನ್ನು ಅಧ್ಯಯನ ಮಾಡಿದಾಗ ಅದರಲ್ಲಿ ರಾಜಕೀಯ ಎಂಬ ವಿಷವನ್ನು ಕೇಳಿದಾಗಲೆಲ್ಲ ನಮಗೆ ಏಕೋ ಬೇಕೋ ನಮ್ಮ ಮನೆಯವರು ಯಾರಿಗೋ ಹೇಳುತ್ತಾರೋ ಅವರಿಗೆ ಮತ ಹಾಕುತ್ತೇವೆ ಎಂದೂ ಹೇಳಿದರು. ಇದರಿಂದ ನಿಮಗೆ ಏನಾದರೂ ಅನುಕೂಲವಿದೆಯೇ? ರಾಜಕೀಯ ವ್ಯಕ್ತಿಗಳು ನಮಗೆ ಹಣವನ್ನು ನೀಡುತ್ತಾರೆ ಅದರಲ್ಲಿ ಎಂ.ಎಲ್.ಎ. ಚುನಾವಣೆ ಬಂದರೆ ಕಮಲಾಪುರದ ಪುರುಷರಿಗೆ ಹಬ್ಬವೆಂದೂ ಗುರುತಿಸಬಹುದು. ಏಕೆಂದರೆ ಪ್ರತಿ ಮನೆಗೆ ೫೦೦ ರೂಪಾಯಿ ನೀಡುವುದು ಸುಮಾರು ವರ್ಷಗಳಿಂದ ಇದೆ. ಈ ಹಣವನ್ನು ಮಹಿಳೆಯರಿಗೆ ನೀಡುವುದಿಲ್ಲ ಅದೇನಿದ್ದರೂ ಪುರುಷನ ಸ್ವತ್ತಾಗಿದೆ. ಮತದಾನ ಪ್ರಚಾರಕ್ಕೂ ಪುರುಷರೇ ರಾಜಕೀಯ ವ್ಯಕ್ತಿಗಳು ಇವರನ್ನು ಸರಿಯಾಗಿ ಬಳಸಿಕೊಂಡು ಮೊಬೈಲ್, ಟಿ.ವಿ. ಇಂತಹಗಳನ್ನು ನೀಡುವ ಕಾರ್ಯವನ್ನು ಇಲ್ಲಿ ಮಾಡಲಾಗುವುದು ಆದರೆ ಇಲ್ಲಿ ಮಹಿಳೆಗೆ ವಾಕ್ ಸ್ವಾತಂತ್ರ್ಯ ಇಲ್ಲದಿರುವುದು ವಿಷಾಧನೀಯವಾಗಿದೆ.

ಒಟ್ಟಾರೆಯಾಗಿ ಕಮಲಾಪುರದ ಬೇಡ ಮಹಿಳೆಯರೂ ರಾಜಕೀಯದ ಅರಿವಿನ ಪ್ರಜ್ಞೆ ವರ್ಷಗಳೇ ಕಳೆದರೂ ಬದಲಾವಣೆ ಕಷ್ಟಸಾಧ್ಯವೆಂಬುದು ಇಲ್ಲಿ ಕಂಡುಬರುತ್ತವೆ.

### ೩.೧೧. ಮಹಿಳೆಯ ವಯಸ್ಸು ಮತ್ತು ದುಡಿಮೆ

ಕಮಲಾಪುರದ ಬೇಡ ಮಹಿಳೆಯರ ದುಡಿಮೆ ಬಹುರೂಪತೆಯಿಂದ ಕೂಡಿದೆ. ಕೃಷಿಯಿಂದ ಹಿಡಿದು ಕೃಷಿಯೇತರ ಚಟುವಟಿಕೆ, ಮನೆಯ ನಿರ್ವಹಣೆ, ಮನೆಗೆಲಸ, ಮಕ್ಕಳ ಶೈಕ್ಷಣಿಕತೆ ಪುರುಷನ ಕಾರ್ಯಗಳನ್ನು ಮಹಿಳೆ ಇಲ್ಲಿ ಸಮಗ್ರವಾಗಿ ನಿರ್ವಹಿಸುತ್ತಿರುವುದು ಕಂಡುಬರುತ್ತದೆ. ಈ ಕಾರ್ಯಗಳಲ್ಲಿ ಪುರುಷನ ಕೆಲಸ ಕಡಿಮೆ. ಏಕೆಂದರೆ ಈ ೭ ಕೇರಿಗಳಲ್ಲಿನ ಬೇಡ ಮಹಿಳೆಯರಲ್ಲಿ, ಕಳೆ ಕೀಳುವುದು, ಬೀಜ ಬಿತ್ತನೆ, ಸಸಿ ನಾಟಿ, ರವದಿ ಹಾರಿಸುವುದು,

ಮಾಡುವುದರ ಜೊತೆಗೆ ಇಲ್ಲಿನ ಕೆಲವು ಮಹಿಳೆಯರು ಪಕ್ಕದಲ್ಲಿರುವ ಕನ್ನಡ ವಿಶ್ವವಿದ್ಯಾಲಯದಲ್ಲಿ ಸ್ವಚ್ಛತಾ ಕೆಲಸಗಳಾದ ಕಸ ಗುಡಿಸುವುದು, ನೀರು ಹಾಯಿಸುವುದು ಕಾರ್ಯವನ್ನು ಮಾಡುತ್ತಾರೆ. ಇದರಿಂದ ಬಂದ ಆದಾಯವನ್ನು ಪುರುಷರು ಕೆಲವೊಂದು ಚಟಗಳಿಗೆ ಬಳಸುತ್ತಿದ್ದರೆ, ಇಸ್ಪೀಟು, ಓ.ಸಿ. (ಮಟ್ಕಾ) ತಂಬಾಕು ಇಂತಹ ದುಶ್ಚಟಗಳಿಗೆ ವಿನಿಯೋಗಿಸುತ್ತಿದ್ದಾರೆ. ಗಂಡ ಹೆಂಡತಿ ಮಕ್ಕಳೆಲ್ಲರೂ ಸೇರಿ ದುಡಿದರೂ ಹೊಟ್ಟೆ ಬಟ್ಟೆಗೆ ಸಾಲದಂತ ಆದಾಯ ರಹಿತ ಕಠಿಣ ಪರಿಶ್ರಮದ ದುಡಿಮೆಗಳಾಗಿವೆ.

ಕಮಲಾಪುರದ ಬೇಡ ಮಹಿಳೆಯರ ದುಡಿಮೆಯನ್ನು ಸಂದರ್ಶನ ಸಮಯದಲ್ಲಿ ಭೇಟಿಯಾದಾಗ ಅವರಲ್ಲಿ ೧೦ ವರ್ಷದ ಬಾಲಕಿಯರಿಂದ ಹಿಡಿದು ೭೫ ವರ್ಷದ ಮುದುಕಿಯರು ಸಹ ಕೃಷಿ ಕೆಲಸಕ್ಕೆ ಹೋಗುತ್ತಿರುವುದು ಕಂಡುಬರುತ್ತದೆ. ಬೆಳಗಿನ ಜಾವ ೭.೩೦. ಸಮಯಕ್ಕೆ ಸರಿಯಾಗಿ ಅವರದೇ ಆದ ಗುಂಪನ್ನು ರಚಿಸಿಕೊಂಡು ದಿನ ಕೂಡುವ ಸ್ಥಳದಲ್ಲಿ ಬಂದು ನಿಲ್ಲುತ್ತಾರೆ. ಅದನ್ನು ನೋಡಿದಾಗ ಅಲ್ಲಿ ಒಂದು ಜಾತ್ರೆ ಏನಾದರೂ ನಡೆಯುತ್ತದೆಯೋ ಎಂಬ ಭಾವನೆ ಮೂಡುತ್ತದೆ. ಅದರಲ್ಲಿ ಚಿಕ್ಕ ಚಿಕ್ಕ ಹೆಣ್ಣು ಮಕ್ಕಳಿಂದ ಹಿಡಿದು ಮುದುಕಿಯವರೆಗೂ ಇರುತ್ತಾರೆ. ಇದರಲ್ಲಿ ಮಧ್ಯವಯಸ್ಕರೇ ಹೆಚ್ಚು. ಇವರು ಕೆಲಸಕ್ಕೆ ಹೋಗುವ ಸ್ಥಳಗಳಿಗೆ ಯಾವುದೇ ವಾಹನ ಸೌಲಭ್ಯ ಇಲ್ಲ ಅವರೆ ಕಾಲುಗಳೇ ಸಾರಿಗೆಯಾಗಿರುತ್ತವೆ.

ಇಲ್ಲಿ ಕೃಷಿಕೂಲಿಯನ್ನು ಮಾಡುವ ಮಹಿಳೆಯರು ತಮ್ಮ ಮಕ್ಕಳನ್ನು ಕೆಲಸಕ್ಕೆ ಕರೆದುಕೊಂಡು ಹೋಗುತ್ತಾರೆ. ಶಾಲೆ ಕಲಿಯುವ ವಯಸ್ಸಿನ ಮಕ್ಕಳ ಕೃಷಿ ಕೂಲಿಯಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ಕಾರಣ ಮನೆಯ ಆರ್ಥಿಕ ದುಸ್ಥಿತಿಯಿಂದಾಗಿ ಆಟ ಆಡುವ ವಯಸ್ಸಿನಲ್ಲಿ ಬೇಡ ಮಹಿಳೆಯರ ಮಕ್ಕಳು ಕೂಲಿ ಕೆಲಸಕ್ಕೆ ಹೋಗುತ್ತಿದ್ದಾರೆ. ಶಾಲೆಯನ್ನು ಬಿಟ್ಟು ಹೆಣ್ಣು ಮಕ್ಕಳು ಮನೆಯವರು ಹೇಳಿದ ಮಾತನ್ನು ಕೇಳುತ್ತ ಬೇರೆ ಬೇರೆ ವಲಯಗಳಲ್ಲಿ ಕೆಲಸವನ್ನು ಮಾಡುತ್ತಿದ್ದಾರೆ. ಅದರಲ್ಲಿ, ಗಾರೆ ಕೆಲಸ, ಕೃಷಿ ಕೂಲಿ, ಸಸಿ ನಾಟಿ ಮಾಡುವುದು, ಕಳೆ ತೆಗೆಯುವುದು, ಇಂತಹ ಕೆಲಸಗಳನ್ನು ಆ ಚಿಕ್ಕ ಮಕ್ಕಳು ಮಾಡುವುದು ಕಂಡುಬರುತ್ತದೆ. ೭ ಕೇರಿಗಳಲ್ಲಿ ಈ ಮಕ್ಕಳ ಸಮಸ್ಯೆ ಇರುವುದನ್ನು ಕ್ಷೇತ್ರಾಧ್ಯಯನದಲ್ಲಿ ಕಂಡುಕೊಳ್ಳಲು ನೆರವಾಗಿದೆ. ವಿಶೇಷವೆಂದರೆ ಇಲ್ಲಿ ಗಂಡು ಮಕ್ಕಳಿಗೆ ಕೆಲಸ ಕಡಿಮೆ. ಹೆಚ್ಚಾಗಿ ಬೇಡ ಮಹಿಳೆಯರ ಗಂಡು ಮಕ್ಕಳು ಕ್ರಿಕೆಟ್ ಬೆಟ್ಟಿಂಗ್, ಜೂಜು, ಪಾನ್‌ಪರಾಗ್ ಹೀಗೆ ಹಲವಾರು ಚಟಗಳನ್ನು ಮಾಡಿದರೂ ಮನೆಯಲ್ಲಿ ಇವರಿಗೆ ಯಾವುದೇ ಕೆಲಸಗಳನ್ನೂ ಮಾಡಲು ಹೇಳುವುದಿಲ್ಲ. ಏಕೆ ಎಂದು ಗಮನಿಸಿದಾಗ ಮುಂದೆ ದುಡಿದು ಅನ್ನ ಹಾಕುವನು ಅವನು ಎಂದು ಈ ಮಹಿಳೆಯರು ಹೇಳುತ್ತಾರೆ. ಎಷ್ಟರ ಮಟ್ಟಿಗೆ

ಅವರ ನಂಬಿಕೆಯೆಂಬುದು ಅರ್ಥವಾಗದ ವಿಚಾರವಾಗಿದೆ. ಬೇಡ ಮಹಿಳೆಯರಿಗೆ ವರ್ಷಪೂರ್ತಿ ಕೆಲಸ ಮಾಡಿದರೂ ಆರ್ಥಿಕವಾಗಿ ಇನ್ನು ಸಬಲರಾಗುತ್ತಿಲ್ಲ. ಇದರಲ್ಲಿ ಹೆಚ್ಚಿನ ಮಟ್ಟದಲ್ಲಿ ಕೆಲಸಕ್ಕೆ ಹೋಗುವ ಮಹಿಳೆಯರೆಂದರೆ ಗೋನಾಳ ಕೇರಿ ಮಹಿಳೆಯರು ಅತಿ ಕಡಿಮೆ ಎಂದರೆ ತಿಮ್ಮನಾಥಕೇರಿ ಮಹಿಳೆಯರು, ಎಂಬುದು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದೆ. ಕಮಲಾಪುರದ ಮಹಿಳೆಯರನ್ನು ಸಬಲರನ್ನಾಗಿ ಮಾಡುವ ಉದ್ದೇಶವನ್ನಿಟ್ಟುಕೊಂಡು ಹಲವಾರು ಯೋಜನೆಗಳು ಬಂದರೂ ಅವರಲ್ಲಿ ಬದಲಾವಣೆ ಆಗಲಾರದ ಸ್ಥಿತಿ ನಿರ್ಮಾಣವಾಗಿದೆ. ಇಲ್ಲಿಯ ಮಹಿಳೆಯರಲ್ಲದೆ ತಮ್ಮ ಮಕ್ಕಳನ್ನು ಬಲಿಪಶುಗಳನ್ನಾಗಿ ಮಾಡಿದ್ದಾರೆ.

**ಗೊಂಚಿಗಾರನ ಪಾತ್ರ**

ಕಮಲಾಪುರದ ಬೇಡ ಮಹಿಳೆಯರ ದುಡಿಮೆಯಲ್ಲಿ ಗೊಂಚಿಗಾರನ ಪಾತ್ರ ಮಹತ್ವದ್ದಾಗಿದೆ. ಗೊಂಚಿಗಾರ ಹುದ್ದೆಯ ಸಮಾನತೆ ಮತ್ತು ಸಮಾಜ ಸಿದ್ಧಾಂತದ ಮೇಲೆ ಸೃಷ್ಟಿಸಲಾಗಿರುತ್ತವೆ. ಗೊಂಚಿಗಾರರು ತುಂಬಾ ವರ್ಷಗಳಿಂದ ಗೊಂಚಿಯನ್ನು ಕಟ್ಟಿ ನಡೆಸಿಕೊಂಡು ಬಂದಿದ್ದಾರೆ. ಕೆಲವೊಬ್ಬರನ್ನು ಗೊಂಚಿಗಾರರನ್ನು ಇಲ್ಲಿ ಪ್ರಸ್ತಾಪಿಸುವುದಾದರೆ ಪತ್ರಿ ಕೊಟ್ರಪ್ಪ, ಪೆನ್ನಯ್ಯ, ಬೋರಯ್ಯ, ಮಾರಕ್ಕ.

ಬೇಡ ಸಮುದಾಯಕ್ಕೆ ಬಹಳ ವರ್ಷದಿಂದಲೂ ಗೊಂಚಿಗಾರರ ಪಾತ್ರ ತಿಳಿದಿತ್ತು ಎಂಬುದು ಕ್ಷೇತ್ರಕಾರ್ಯದಿಂದ ತಿಳಿಯಲಾಗಿದೆ. ಇವರು ತುಂಬಾ ವರ್ಷಗಳಿಂದ ಗೊಂಚಿಯನ್ನು ಕಟ್ಟಿಕೊಂಡು ಬಂದಿದ್ದು ಇಲ್ಲಿ ಇವರು ಒಬ್ಬ ಮಾರ್ಗದರ್ಶ ಲೀಡರ್ ಆಗಿ ಕಾರ್ಯ ನಿರ್ವಹಿಸುತ್ತಾರೆ. ಅದರಲ್ಲೂ ವಿಶೇಷವಾಗಿ ಮಹಿಳೆಯರ ಆರ್ಥಿಕತೆಯ ದೃಷ್ಟಿಯಿಂದ ಇವರು ಆರ್ಥಿಕವಾಗಿ ಮಹಿಳೆಯರನ್ನು ಅಭಿವೃದ್ಧಿ ಮಾಡಬೇಕೆಂದು ಸ್ವಾಮಿಗಳು, ಸಾಹುಕಾರ ಗದ್ದೆಗಳಲ್ಲಿ ಹೆಚ್ಚು ಫಸಲು, ಅವರ ಗದ್ದೆಗಳಲ್ಲಿ ಕೆಲಸ ಮಾಡಿದರೆ ನಮಗೆ ಆದಾಯ ಹೆಚ್ಚು ಬರುತ್ತದೆ ಎಂಬ ಮಾತನ್ನು ಮಹಿಳೆಯರಿಗೆ ಹೇಳಿ ಅವರಿಗೆ ಅವರ ಗದ್ದೆಗಳಲ್ಲಿ ಕೆಲಸ ಮಾಡಲು ನೆರವಾಗುತ್ತಾರೆ. ಅದಲ್ಲದೆ ಮಹಿಳೆಯರಿಗೆ ಏನಾದರೂ ಕಷ್ಟ ಬಂದರೆ ಸಾಹುಕಾರರ ಕಡೆಯಿಂದ ಸಾಲ ತೆಗೆದುಕೊಂಡು ಬಂದು ಮಹಿಳೆಯರಿಗೆ ನೀಡುವ ಪದ್ಧತಿ ಇನ್ನು ಜೀವಂತವಾಗಿದೆ. ಇದರಿಂದಾಗಿ ಮಹಿಳೆಯರು ಚಾಚು ತಪ್ಪದೇ ಆ ಗದ್ದೆಗಳಿಗೆ ಹೋಗಿ ಕೆಲಸ ನಿರ್ವಹಿಸಿಕೊಂಡು ಬರುತ್ತಾರೆ. ಪ್ರತಿ ಸೋಮವಾರದ ದಿನದಂದು ಇವರಿಗೆ ಕೂಲಿ ಅಂದರೆ ಕಮಲಾಪುರದಲ್ಲಿ ಇದನ್ನು (ಬಟವಾಡಿಗಿ) ಎಂದೂ ಕರೆದಿದ್ದು ಇದನ್ನು ಹಂಚುವುದು ಗೊಂಚಿಗಾರ(ಅರ್ಥ ಗುಂಪಿನ ಸರ್ವಾಧಿಕಾರಿ ಸಮನ್ವಯ ಅಧಿಕಾರಿ)ನೇ ಆಗಿರುತ್ತಾನೆ.

## ಕಮಲಾಪುರದ ದುಡಿಯುವ ವಯಸ್ಸಿನ ಮಹಿಳೆಯರು

| ಕ್ರಸಂ. | ಕೇರಿಯ ಹೆಸರು | ಸಂದರ್ಶಿಸಿದ ಕುಟುಂಬಗಳು | ಮುದುಕಿಯರು | ಮಧ್ಯ ವಯಸ್ಕರು | ಚಿಕ್ಕ ಮಕ್ಕಳು | ಪ್ರತಿಶತ |
|---|---|---|---|---|---|---|
| ೧. | ತಿಮ್ಮನಾಥಕೇರಿ | ೪೦ | ೫ | ೧೦ | ೬ | ೯ |
| ೨. | ಚೌಡಿಕೇರಿ | ೪೦ | ೧೯ | ೧೫ | ೧೨ | ೧೭ |
| ೩. | ಹೀರೇಕೇರಿ | ೪೦ | ೨೦ | ೧೦ | ೧೦ | ೧೪ |
| ೪. | ಗೋನಾಳಕೇರಿ | ೪೦ | ೧೦ | ೫ | ೧೫ | ೨೨ |
| ೫. | ಬಂಡೇಕೇರಿ | ೪೦ | ೧೦ | ೧೦ | ೧೦ | ೧೪ |
| ೬. | ಮನ್ಮಥಕೇರಿ | ೪೦ | ೩ | ೧೯ | ೫ | ೭ |
| ೭. | ತಳವಾರ ಕೇರಿ | ೪೦ | – | ೫ | ೧೨ | ೧೭ |




ವಯಸ್ಸಾದವರು ಕೂಡ ದುಡಿಯಲು ಹೋಗುತ್ತಾರೆ. ಬೆಳಗಿನ ಜಾವ ರಾತ್ರಿ ಉಳಿದ ತಂಗಳನ್ನ ಕಾರಪುಡಿ ಚಟ್ನಿಯನ್ನು ಕಟ್ಟಿಕೊಂಡು ಬಿರು ಬಿಸಿಲಿನಲ್ಲಿ ಗವಿಯಂತಿರುವ ಗದ್ದೆಗಳಲ್ಲಿ ನೂಕಿ ಕೆಲಸವನ್ನು ನಿರ್ವಹಿಸುತ್ತಾರೆ. ಸುಮಾರು ವರ್ಷಗಳಿಂದ ಇಲ್ಲಿನ ಮಹಿಳೆಯರ ಕೃಷಿಯ ಕೂಲಿಯಲ್ಲಿ ದುಡಿಯುವ ಕೆಲಸ ಬದಲಾವಣೆ ಆಗಿಲ್ಲ ಆದರೆ ಕೂಲಿನಲ್ಲಿ ಮಾತ್ರ ಬದಲಾಗಿದೆ. ಸುಮಾರು ವರ್ಷಗಳಿಂದ ೨೫/– ರೂಪಾಯಿಗಳಿದ್ದು, ಕೃಷಿ ಕೂಲಿ ಇಂದು ೧೨೫/– ರೂಪಾಯಿಗಳು ಆಗಿದೆ. ಅದರಲ್ಲಿ ಕಳೆ ತೆಗೆಯುವುದಕ್ಕೆ ರೂ.೧೦೦/– ೧ ಚೀಲ ಶೇಂಗಾ ಅರಿಯುವುದಕ್ಕೆ ರೂ.೧೩೦/– ಸಸಿ ನಾಟಿ ಮಾಡುವುದಕ್ಕೆ ರೂ.೧೩೦/– ಮೆಕ್ಕಜೋಳ ಮುರಿಯುವುದಕ್ಕೆ ರೂ.೧೦೦/– ಹೀಗೆ ಕಬ್ಬು ಕಡಿಯುವುದಕ್ಕೆ ದಿನಕ್ಕೆ ರೂ. ೧೫೦/–. ಹೀಗೆ

ಕೃಷಿಯ ಕೂಲಿಗಳಲ್ಲಿ ಬದಲಾವಣೆ ಆದರೂ ಮಹಿಳೆಯರ ಆರ್ಥಿಕ ಅಭಿವೃದ್ಧಿಯಲ್ಲಿ ಮೊದಲು ಇದ್ದ ಸ್ಥಿತಿಯನ್ನು ಕಮಲಾಪುರದ ಬೇಡ ಮಹಿಳೆಯರು ಅನುಭವಿಸುತ್ತಿದ್ದಾರೆ. ಕೆಲವರು ಸರಕಾರವು ನೀಡಿದ ಮನೆಯನ್ನು ಕಟ್ಟಿಕೊಂಡಿರುವುದು ಕ್ಷೇತ್ರ ಕಾರ್ಯದಿಂದ ತಿಳಿದುಬಂದಿದೆ. ಇಲ್ಲಿ ವಯಸ್ಸನ್ನಾಧರಿಸಿ ಕೆಲಸ ಮಾಡುತ್ತಿಲ್ಲ. ದುಡಿಯುವ ವಯಸ್ಸು ಮೀರಿದರೂ ಕೆಲಸವನ್ನು ಮಾಡುತ್ತಿದ್ದಾರೆ. ಕೆಲವು ಮಹಿಳೆಯರನ್ನು ಸಂದರ್ಶಿಸಿದಾಗ 'ನನಗೆ ಚಿಕ್ಕ ವಯಸ್ಸಿನಲ್ಲಿ ಮದುವೆ ಮಾಡಿದ್ದು, ಇಂದೂ ನನಗೆ ಹೆಚ್ಚು ಕೆಲಸ ಮಾಡಿದರೆ ತಲೆನೋವು, ಎದೆನೋವು ಬರುತ್ತದೆಪ್ಪ, ಆದರೂ ಕೆಲಸಕ್ಕೆ ಹೋಗದಿದ್ದರೆ ಮನೆಯ ನಿರ್ವಹಣೆ ಕಷ್ಟವಾಗುತ್ತಿದೆ ಎಂದು ಹೇಳಿದರು'.

ಇದರಿಂದಾಗಿ ಇಲ್ಲಿನ ಪುರುಷರು ಎಷ್ಟರಮಟ್ಟಿಗೆ ಮಹಿಳೆಯರ ದುಡಿಮೆಯನ್ನು ಸ್ವೀಕರಿಸುತ್ತಿದ್ದಾರೆ ಎಂಬುದನ್ನು ತಿಳಿಯಲಾಗಿದೆ. ಇಲ್ಲಿಯ ಮಹಿಳೆಯರು ದುಡಿಯುವುದನ್ನು ಬಿಟ್ಟರೆ ಬೇರೆ ಯಾವ ಕ್ಷೇತ್ರದ ಕಡೆಗೆ ಒಲವನ್ನು ತೋರಿಸುವ ಸ್ಥಿತಿ ಕಂಡುಬರುತ್ತಿಲ್ಲ.

**ಅಡಿಟಿಪ್ಪಣಿ**

೧. ವೀರೇಂದ್ರ ಶೀಲವಂತ, ಕೃಷಿ ಆಚರಣೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪುಟ.೨.

೨. ಉಳ್ಳೇಶ್ವರಪ್ಪ ಎಂ., ಹೊಸಪೇಟೆ ತಾಲೂಕಿನ ಬೇಡ ಸಮುದಾಯ ಮಹಿಳೆ, ಸಂ.ಡಾ.ಮಂಜುನಾಥ ಬೇವಿನಕಟ್ಟಿ, ಪ್ರಸಾರಾಂಗ, ಕವಿಹಂ ೨೦೦೯, ಪು.ಸಂ.೨೩೫,

೩. ಸೋಮಶೇಖರ್ ಎಸ್.ವೈ., ಹಂಪಿಯ ಬಜಾರುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪುಟ.ಸಂ.೯.

೪. ತಾರಿಹಳ್ಳಿ ಹನುಮಂತಪ್ಪ(ಸಂ), ಕಮಲಾಪುರದ ಬೇಡ ನಾಯಕರು: ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩, ಪು.ಸಂ.೧೬೪.

೫. ಹೆಚ್.ಆರ್.ಕೆ., ಕರ್ನಾಟಕದ ಆರ್ಥಿಕತೆ, ೧೯೯೭, ಪು.ಸಂ.೨೭೮.

೬. ಕರಿಶೆಟ್ಟಿ ರುದ್ರಪ್ಪ, ಮ್ಯಾಸನಾಯಕರ ಒಂದು ಜನಾಂಗಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೪, ಪುಟ.೧೦೪.

೭. ಸುನಂದಾ ಸೋರಗಾಂವಿ, ಮಹಿಳೆ: ಕೃಷಿ ಆರ್ಥಿಕ ಪರಿಸರ, ಕುಕ್ಕೇಶ್ರೀ ಪ್ರಕಾಶನ ಬೆಂಗಳೂರು, ೨೦೦೯, ಪು.ಸಂ.೨ ಮತ್ತು ೩.

೮. ಶ್ರೀದೇವಿ ವಿ.ಆಲೂರು, ಶೈಕ್ಷಣಿಕ ವಲಯದಲ್ಲಿ ಮಹಿಳಾ ದೌರ್ಜನ್ಯದ ನೆಲೆಗಳು, ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ, ೨೦೧೨, ಪು.ಸಂ.೨೭.

೯. ಇಂದಿರಾ ಎಸ್., ಮಹಿಳೆ ಮತ್ತು ಸವಾಲುಗಳು, ಶ್ರುತಿಲೂಪ ಪ್ರಕಾಶನ, ಮೈಸೂರು, ೨೦೧೦, ಪು.೧೧

೧೦. ಗೀತಾ ಕೃಷ್ಣಮೂರ್ತಿ, ಮಹಿಳಾ ಹಕ್ಕಗಳು, ಮಾನವ ಹಕ್ಕುಗಳ ನೆಲೆಯಲ್ಲಿ, ಮಹಿಳಾ ಅಧ್ಯಯನ ಕೇಂದ್ರ, ಪ್ರಸಾರಾಂಗ, ಕ.ವಿ.ವಿ.ಹಂಪಿ, ೨೦೦೯, ಪು.ಸಂ. ೧೯೨.

೧೧. ಮೀನಾಕ್ಷಿ ಡಿ., ಸಬಲೀಕರಣ ದಾರಿಯಲ್ಲಿ ತಳಸಮುದಾಯದ ಮಹಿಳೆಯರು, ಮಯ ಪ್ರಕಾಶನ, ಕಮಲಾಪುರ, ೨೦೧೫, ಪು.೩೩.

* * *

## ಅಧ್ಯಾಯ ೪

# ಬೇಡ ಮಹಿಳೆಯರ ಸ್ವ ಸಹಾಯ ಗುಂಪುಗಳ ಆರ್ಥಿಕತೆ ಮತ್ತು ಸರಕಾರದ ಯೋಜನೆಗಳು

**ಸ್ವ ಸಹಾಯ ಗುಂಪುಗಳು ಮತ್ತು ಮಹಿಳೆ**

"ಮಾನವ ಸಂಪನ್ಮೂಲ ಅಭಿವೃದ್ಧಿಗೆ ಪ್ರಾಮುಖ್ಯತೆ ನೀಡಿದ್ದು ೯೦ ರ ದಶಕ. ಮಹಿಳೆಯು ಆರ್ಥಿಕ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳುವ ಮೂಲಕ ಮಹಿಳೆಯರ ಹಕ್ಕುಗಳ ಪ್ರತಿಪಾದನೆಗೆ ಪ್ರೇರೇಪಿಸುವ ಪರಿಕಲ್ಪನೆಗಳು ಸ್ವ ಸಹಾಯ ಗುಂಪುಗಳ ಮುಖಾಂತರ ಸಕಾರಗೊಂಡವು. ಲಿಂಗಸಂಬಂಧಿ, ಅಸಮಾನತೆ, ಶೋಷಣೆ, ಹೆಣ್ಣುಮಕ್ಕಳ ಬಗೆಗಿನ ಔದಾಸೀನ್ಯ, ಅಸಡ್ಡೆ ಸಾಮಾಜಿಕ ಕಟ್ಟಳೆಗಳು ಮಾನವಸಂಪನ್ಮೂಲ ಅಭಿವೃದ್ಧಿಯಲ್ಲಿ ತೊಡಕುಗಳು ಎಂದು ನಿರ್ಧರಿಸಲಾದರೂ ಮಾನವ ಸಂಪನ್ಮೂಲ ಅಭಿವೃದ್ಧಿಯಲ್ಲಿ ಮಹಿಳೆಯರ ಸರ್ವತೋಮುಖ ಅಭಿವೃದ್ಧಿ ಸಾಧನೆಗೆ ಸಮಾನತೆ, ಸಶಕ್ತತೆ ಮತ್ತು ಸೌಲಭ್ಯಗಳು ಪೂರ್ಣ ಉಪಯೋಗದಂತಹ ಪ್ರಗತಿಪರ ಯೋಜನೆಗಳು ಅಂಶಗಳು ಬಹುಮುಖ್ಯ ಅನುಷ್ಠಾನ ಮತ್ತು ಫಲಕಾರಿಯಾಗುವುದಕ್ಕೆ ಮಹಿಳೆಯರನ್ನು ಆರ್ಥಿಕ ಚಟುವಟಿಕೆಗಳ ಸ್ವಸಹಾಯ ಗುಂಪುಗಳಾಗಿವೆ.

ಮಹಿಳೆಯರ ಆರ್ಥಿಕ ಸುಧಾರಣೆಯಲ್ಲಿ ಸ್ವಸಹಾಯ ಸಂಘಗಳ ಪಾತ್ರ ಬಹಳ ಮಹತ್ವವಾದುದಾಗಿ ಆಗಬೇಕಾದುದು ಮಾನವೀಯ ಮೌಲ್ಯದ ಪುನಃ ಸ್ಥಾಪನೆ ಒಬ್ಬಬ್ಬರಿಂದಲೇ ಆಗುವ ಕೆಲಸವಲ್ಲ. ಇದು ಸಾಮೂಹಿಕವಾಗಿದೆ. ಹೀಗಾಗಿ ಸ್ವಸಹಾಯ ಸಂಘಗಳು ಅನಿವಾರ್ಯವಾಗಬೇಕಾಗಿದೆ. ಸಮಾಜದ ಸೃಷ್ಠಿಯ ಪರಿಕಲ್ಪನೆಯೊಂದಿಗೆ ನಿರ್ದಿಷ್ಟ ಅವಕಾಶ, ಸೌಲಭ್ಯದ ಈಡೇರಿಕೆಗಾಗಿ ಈ ಸಂಘಗಳ ಚಟುವಟಿಕೆಯನ್ನು ಹಮ್ಮಿಕೊಳ್ಳಲಾಗಿದೆ. ಸ್ವಸಹಾಯ ಗುಂಪುಗಳನ್ನು ರೂಪಿಸಿಕೊಂಡು ಅವರು ಸರಕಾರದ ಮೂಲಕ ಆರ್ಥಿಕ ಸಾಲ ಸೌಲಭ್ಯಗಳನ್ನು

ಪಡೆಯುವುದರಿಂದ ಸ್ವಸಹಾಯ ಗುಂಪುವಿನ ಮುಖಾಂತರ ಹಣವನ್ನು ಪಡೆದ ಪ್ರತಿ ತಿಂಗಳು ಒಂದು ನಿರ್ದಿಷ್ಟ ಹಣ ಕಟ್ಟುವುದರಿಂದ ತೆಗೆದುಕೊಂಡ ಸಾಲವನ್ನು ಪ್ರತಿ ತಿಂಗಳ ಕಂತುಗಳ ರೂಪದಲ್ಲಿ ತೀರಿಸುವುದು".[೧]

ಸಾಲವನ್ನು ಕಂತುಗಳ ಮೂಲಕ ತೀರಿಸುವುದರಿಂದ ಬ್ಯಾಂಕುಗಳ ಸ್ವಸಹಾಯ ಗುಂಪುಗಳಿಗೆ ಸಾಲ ಸೌಲಭ್ಯ ಒದಗಿಸುವುದು ಮತ್ತು ಕಡಿಮೆ ಬಡ್ಡಿದರದಲ್ಲಿ ಹಣ ನೀಡುವುದರಿಂದ ಸ್ವಸಹಾಯ ಗುಂಪುಗಳಲ್ಲಿನ ಸದಸ್ಯರಿಗೆ ಅತ್ಯಾನುಕೂಲವಾಗಿದೆ. ದೇಶದ ಆರ್ಥಿಕ ಅಭಿವೃದ್ಧಿ ಸುಧಾರಣೆಯಲ್ಲಿ ಸ್ವಸಹಾಯ ಗುಂಪುಗಳು ಬಹಳ ಪಾತ್ರ ಮಹತ್ವವಾಗಿವೆ. ಸ್ವ-ಸಹಾಯ ಗುಂಪುಗಳಾಗಿ ಬ್ಯಾಂಕುಗಳ ಸಾಲ ನೀಡುವುದರಿಂದ ಅದರಿಂದ ಆಗುವ ಉಪಯೋಗ ಮಹಿಳೆಯರು ಮಾಡಿಕೊಳ್ಳುವುದು ಮತ್ತು ಸಾಲ ತೆಗೆದುಕೊಂಡವರು ಹೈನುಗಾರಿಕೆ, ಕಿರಾಣಿ ಅಂಗಡಿ, ಬಟ್ಟೆ ವ್ಯಾಪಾರಿ, ಮೀನುಗಾರಿಕೆ, ಟೈಲರಿಂಗ್, ಮತ್ತು ಗಣಕಯಂತ್ರಗಳ ತರಬೇತಿ, ಮುಂತಾದವುಗಳಿಗೆ ಸರ್ಕಾರ ಸ್ವ-ಸಹಾಯ ಗುಂಪುಗಳಿಗೆ ಸಹಾಯಕಾರಿಯಾಗಿದೆ. ಆದ್ದರಿಂದ ಮಹಿಳೆಯರ ಜೀವನ ಮಟ್ಟವು ಆರ್ಥಿಕ ಸುಧಾರಣೆಯಲ್ಲಿ ಉತ್ತಮವಾದ ಸಮಾನ ಆಸಕ್ತಿ, ಪರಿಸ್ಥಿತಿ, ಸ್ಪಷ್ಟ ಆಶಯಗಳು ಮತ್ತು ಉದ್ದೇಶಗಳನ್ನೇ ಈ ಸದಸ್ಯರು ಹೊಂದಿರುತ್ತಾರೆ. ಒಂದು ಗುಂಪನ್ನು ರಚಿಸಬೇಕಾದ ಸಮಾನ ಮನಸ್ಥಿತಿಯನ್ನು ಹೊಂದಿರಬೇಕಾದ ಅವಶ್ಯಕತೆ ಇದೆ.

ಈ ಗುಂಪಗಳನ್ನು ಒಂದುಗೂಡಿಸುವುದರಿಂದ ಆರ್ಥಿಕವಾಗಿ ಹಿಂದುಳಿದ ಬಡವರ್ಗದ ಮಹಿಳೆಯರಿಗೆ ಸೌಲಭ್ಯ ದೊರೆಯುವಂತೆ ರಚಿಸಿಕೊಳ್ಳಬೇಕು. ಸ್ವಸಹಾಯ ಗುಂಪು ಸ್ವಯಂ ಆಸಕ್ತಿಯಿಂದ ಸಮಾನ ಆರ್ಥಿಕ ಹಾಗೂ ಸಾಮಾಜಿಕ ಅಭಿವೃದ್ಧಿ ಸಾಧಿಸಲು ನಿರಂತರ ಶ್ರಮಿಸುವ ಜನರ ಗುಂಪಾಗಿವೆ. ಈ ಗುಂಪು ಆಸಕ್ತಿಯುಳ್ಳ ನಿರ್ದಿಷ್ಟ ಜನರನ್ನು ಒಳಗೊಂಡಿರುತ್ತದೆ. ಅಭಿವೃದ್ಧಿ ಮಹತ್ವಾಕಾಂಕ್ಷೆಯೊಂದಿಗೆ ಗುಂಪನ್ನು ರಚಿಸಿಕೊಂಡಿದ್ದರೂ ಗುಂಪಿಗೆ ಸ್ಪಷ್ಟವಾದ ಈ ನಿಯಮ ನಿಬಂಧನೆ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಗುರುತಿಸಲ್ಪಡಬೇಕು. ಗುಂಪಿನ ಸದಸ್ಯ ಸರ್ವತೋಮುಖ ಅಭಿವೃದ್ಧಿಗೆ ಪೂರಕವಾದ ಚಟುವಟಿಕೆಗಳನ್ನು ಸ್ವ-ಸ್ವಹಾಯ ಗುಂಪುಗಳು ಹಮ್ಮಿಕೊಳ್ಳಬೇಕು. ಜೊತೆಗೆ ಇದೊಂದು ಮೈತ್ರಿ ಗುಣವನ್ನು ಹೊಂದಿರುವುದರಿಂದ ವಿಚಾರ ವಿನಿಮಯಕ್ಕೆ ಮುಕ್ತ ವಾತಾವರಣವನ್ನು ಕಲ್ಪಿಸಿಕೊಟ್ಟು ಬೆಳವಣಿಗೆಗೆ ಇರುವ ತೊಂದರೆಗಳನ್ನು ನಿವಾರಿಸಿ ಸದಸ್ಯರ ಆರೋಗ್ಯ ವೃದ್ಧಿಸಲು ಮತ್ತು ಬೆಳವಣಿಗೆಗೆ ಹೊಂದಲು ಅನುಕೂಲವಾಗುತ್ತದೆ. ೧೫-೨೦ ಬಡ ಕುಟುಂಬದ ಸದಸ್ಯರು ಒಂದೆಡೆ ಸೇರಿ ತಮ್ಮ ಸದಸ್ಯರುಗಳ ಸಹಭಾಗಿತ್ವದಲ್ಲಿ ಚರ್ಚಿಸಿ ಪರಿಹಾರ ಕಂಡುಕೊಳ್ಳುವ ಗುಂಪುಗಳೇ ಸ್ವ-ಸಹಾಯ ಗುಂಪುಗಳಾಗಿವೆ. ಇಲ್ಲಿ ಸಮಾನ

ಆಸಕ್ತಿ ಸ್ಪಷ್ಟ ಆಶಯಗಳನ್ನೊಂದಿರುವ ನಿರ್ದಿಷ್ಟ ಸದಸ್ಯರು ಇರುತ್ತಾರೆ. ಗುಂಪು ರಚಿಸುವ ಹಕ್ಕು ಸಮಾನತೆಯನ್ನು ಕಾಣುವ ಗುಣ ಹೊಂದಿರಬೇಕು. ಆರ್ಥಿಕವಾಗಿ, ಸಾಮಾಜಿಕವಾಗಿ ಸೌಲಭ್ಯ ಪಡೆಯುವಂತಹ ಶಕ್ತಿ ಗುಂಪುಗಳಾಗಿರಬೇಕು.

**ಸಹಾಯ ಗುಂಪುಗಳ ಉದ್ದೇಶಗಳು**

- ನಿಯಮಿತವಾಗಿ ಉಳಿತಾಯ ಮಾಡುವ ಹವ್ಯಾಸ
- ಸರಕಾರದ ಬಗ್ಗೆ ಹರಿವು
- ಮಹಿಳೆಯರು ತಮ್ಮ ಹೆಣ್ಣುಮಕ್ಕಳಿಗೆ ಶಿಕ್ಷಣವನ್ನು ನೀಡಲು ನೆರವು
- ಮಹಿಳೆಯರ ಸರ್ವೋತಮುಖ ಅಭಿವೃದ್ಧಿ
- ಸಹಭಾಗಿತ್ವದ ಸ್ವಯಂ ಮೌಲ್ಯಮಾಪನವನ್ನು ನಡೆಸುವ ಸಾಮರ್ಥ್ಯವಿದೆ.
- ಸಾಲ ಮರುಪಾವತಿ ಮಾಡದಿದ್ದಾಗ ಬಹಿಷ್ಕಾರ ಹಾಕುವುದು
- ಮಧ್ಯಪಾನವನ್ನು ತಡೆಗಟ್ಟಲು ನೆರವಾಗುವುದು.

ಬೇಡ ಮಹಿಳೆಯರು ಇಂದು ಸ್ವ-ಸಹಾಯ ಗುಂಪುಗಳನ್ನು ನಿರ್ಮಿಸಿಕೊಂಡಿದ್ದು ಅದರಲ್ಲೂ ಸ್ವ-ಸಹಾಯ ಸಂಘದ ಉದ್ದೇಶವೇನೆಂದರೆ ಸಹಭಾಗಿತ್ವವನ್ನು ಪ್ರತಿನಿಧಿಸುವ ಒಂದು ಮಾದರಿಯಾಗಿದೆ. ಸ್ವತ ದುಡಿಮೆಯ ಮುಖಾಂತರ ಆರ್ಥಿಕ ಅಭಿವೃದ್ಧಿಯಾಗಿದೆ.

**ಸ್ವ-ಸಹಾಯ ಗುಂಪುಗಳ ಅರ್ಥ**

ಸಹಭಾಗಿತ್ವದಲ್ಲಿ ಚರ್ಚಿಸಿ ಪರಿಹಾರ ಕಂಡುಕೊಳ್ಳುವ ಗುಂಪಿಗೆ ಸ್ವ-ಸಹಾಯ ಗುಂಪುಗಳೆಂದು ಕರೆಯಲಾಗಿದೆ. ಜನರು ತಮ್ಮ ಆರ್ಥಿಕ ಮತ್ತು ಸಾಮಾಜಿಕ ಮಟ್ಟವನ್ನು ಸುಧಾರಿಸಲು ಮಾಡಿಕೊಂಡ ಸಣ್ಣ ಸಂಘಟನೆಯನ್ನು ಸ್ವ-ಸಹಾಯ ಗುಂಪು ಅಥವಾ ಸಂಘ ಎಂಬ ಅರ್ಥ ವಿವರಣೆ ಇದನ್ನು ಉಳಿತಾಯ, ಗಳಿಕೆ, ಕಲಿಕೆ, ಸ್ನೇಹ, ಪ್ರಾಮಾಣಿಕತೆ, ಮಿತವ್ಯಯ, ನಾಯಕತ್ವ, ಉತ್ಪಾದನೆ, ಬೆಳವಣಿಗೆ, ಸಂಪನ್ಮೂಲ, ಅವಕಾಶಗಳು, ಐಕ್ಯತೆ, ಪ್ರಗತಿ

ಮಹಿಳೆಯರ ಆರ್ಥಿಕ ಸುಧಾರಣೆಯಲ್ಲಿ ಸ್ವಸಹಾಯ ಗುಂಪುಗಳ ಪಾತ್ರ ಮಹತ್ವವಾಗಿದೆ. ಅದರಲ್ಲಿ ಮಹಿಳೆಯರ ಸ್ವಸಹಾಯ ಗುಂಪುಗಳಲ್ಲಿ ಯಾವುದೇ ಜಾತಿ, ಮತ, ಬೇದ ಶಾಪವನ್ನು ತೊಡೆದುಹಾಕಲು ಕಾರಣವಾಗಿದೆ. ಸರಕಾರೇತರ ಸಂಸ್ಥೆಗಳ ಮೂಲಕ ಅಭಿವೃದ್ಧಿ, ಸಾಧಿಸುವ ಪ್ರಯತ್ನಗಳನ್ನು ಸಂಘಗಳು ಮಾಡುತ್ತವೆ. ಇಂತಹ ಸಂಘಗಳ ಮೂಲಕ ಸರ್ಕಾರಗಳು ಮಹಿಳೆಯರನ್ನು ಅಭಿವೃದ್ಧಿಪಡಿಸಲು ಪ್ರಯತ್ನಿಸುತ್ತದೆ. ಈ ಪ್ರಯತ್ನಗಳ ಇಂತಹ ಸಂಘಗಳ ಮಹಿಳೆಯರ ಸುಧಾರಣೆಗೆ ಬೆಳವಣಿಗೆಗೆ ಕಾರಣವಾಗಿದೆ.

**ಅಧ್ಯಯನಕ್ಕೆ ತೆಗೆದುಕೊಂಡ ಮಹಿಳಾ ಸ್ವ-ಸಹಾಯ ಕಮಲಾಪುರದ ಸಂಘಗಳ ವಿವರ**

| ಕ್ರ.ಸಂ. | ಸಂಘಗಳ ಹೆಸರು | ಬ್ಯಾಂಕುಗಳ ಹೆಸರು | ಒಟ್ಟು ಸದಸ್ಯರ ಸಂಖ್ಯೆ | ಸಂದರ್ಶಿಸಿದ ಸದಸ್ಯರು | ಸಭೆ ಸೇರುವುದು |
|---|---|---|---|---|---|
| ೧. | ಶ್ರೀ ವಿದ್ಯಾ ನಿರಂತರ ಉಳಿತಾಯ ಸಂಘ | ಎಸ್.ಬಿ.ಐ. | ೧೬ | ೧೦ | ವಾರಕ್ಕೊಮ್ಮೆ |
| ೨. | ಸೌಭಾಗ್ಯ ನಿರಂತರ ಉಳಿತಾಯ ಸಂಘ | ಎಸ್.ಬಿ.ಐ. | ೧೫ | ೧೦ | ವಾರಕ್ಕೊಮ್ಮೆ |
| ೩. | ಪ್ರಿಯದರ್ಶಿನಿ ನಿರಂತರ ಉಳಿತಾಯ ಸಂಘ | ಎಸ್.ಬಿ.ಐ. | ೧೪ | ೧೦ | ವಾರಕ್ಕೊಮ್ಮೆ |
| ೪. | ಆನಂದ ದೀಪ ನಿರಂತರ ಉಳಿತಾಯ ಸಂಘ | ಎಸ್.ಬಿ.ಐ. | ೧೫ | ೧೦ | ವಾರಕ್ಕೊಮ್ಮೆ |
| ೫. | ಶ್ರೀ ಮಾರೆಮ್ಮ ನಿರಂತರ ಉಳಿತಾಯ ಸಂಘ | ಎಸ್.ಬಿ.ಐ. | ೧೬ | ೧೦ | ವಾರಕ್ಕೊಮ್ಮೆ |
| ೬. | ಕಾಳಿಕಾಂಬ ನಿರಂತರ ಉಳಿತಾಯ | ಎಸ್.ಬಿ.ಐ. | ೧೪ | ೧೦ | ವಾರಕ್ಕೊಮ್ಮೆ |
| | | **ಒಟ್ಟು** | **೯೦** | **೬೦** | **ಮಹಿಳೆಯರು** |

ಉದಾಹರಣೆ: ಉಳಿತಾಯದ ಸ್ವಸಹಾಯ ಗುಂಪುಗಳನ್ನು ರಚಿಸಿಕೊಂಡಿದ್ದು ಇದರಲ್ಲಿ ಬೇಡ ಮಹಿಳೆಯರ ಸಹಾಯ ಭಾಗಿಯಾಗಿದ್ದಾರೆ. ಈ ಎಲ್ಲಾ ಉಳಿತಾಯವನ್ನು ಎಸ್.ಬಿ.ಐ.ನ್ನು ಬ್ಯಾಂಕಿನಲ್ಲಿ ತಮ್ಮ ಠೇವಣಿಯನ್ನು ಹೂಡುಕಿ ಮಾಡುತ್ತಿದ್ದಾರೆ. ಇವರು ವಾರಕ್ಕೆ ಒಮ್ಮೆ ಸಭೆ ಸೇರಿ ಹಣದ ಉಳಿತಾಯ ಬಗ್ಗೆ ಚರ್ಚಿಸಿ ಹಣವನ್ನು ಇನ್ನು ಹೂಡಿಕೆ ಮಾಡಲು ಪ್ರಯತ್ನಿಸಿ ಮಹಿಳೆಯರಿಗೆ ಏನಾದರೂ ಸಮಸ್ಯೆಗಳುಂಟಾದರೆ ಅವರ ಪ್ರತಿ ತಿಂಗಳು ೧೦೦ ರೂಪಾಯಿ ಮುಖಾಂತರ ಹಣವನ್ನು ಕಟ್ಟಿ ನಂತರ ಸದಸ್ಯರ ಕಡೆಯಿಂದ ಹಣವನ್ನು ಲೋನ್‌ಗಳ ಮುಖಾಂತರ ಪಡೆಯುತ್ತಾರೆ. ಪ್ರತಿ ಕೇರಿಗಳ ಸ್ವ-ಸಹಾಯ ಗುಂಪುಗಳಲ್ಲಿ ಭಾಗಿಯಾದ ೧೦ ಮಹಿಳೆಯರು ಮಾತ್ರ ಸಂದರ್ಶಿಸಲಾಯಿತು. ಅದರಲ್ಲಿ ಕೇರಿಯ ೪೦ ಜನ ಮಹಿಳೆಯರು ೧೦ ಜನ ಸ್ವಸಹಾಯ ಗುಂಪುಗಳು ಇರುವುದು ಕಂಡುಬಂದದ್ದು ಅದನ್ನು ಮಾತ್ರ ಇಲ್ಲಿ ಉಲ್ಲೇಖಿಸಲಾಗಿದೆ.

| ಕ್ರ.ಸಂ. | ವಯಸ್ಸು | ಸದಸ್ಯರ ಸಂಖ್ಯೆ | ಪ್ರತಿಶತ |
|---|---|---|---|
| ೧. | ೧೫-೨೫ | ೦೫ | ೮.೩೩ |
| ೨. | ೨೬-೩೫ | ೨೫ | ೪೧.೧ |
| ೩. | ೩೬-೪೫ | ೨೦ | ೩೩.೩ |
| ೪. | ೪೬-೫೦ | ೦೬ | ೧೦.೬೩ |
| ೫. | ೫೦ಕ್ಕಿಂತ ಅಧಿಕ | ೦೪ | ೬.೬೪ |
| | **ಒಟ್ಟು** | **೬೦** | - |




ಉದಾಹರಣೆ ಕಮಲಾಪುರದ ಕೆಲವೊಂದು ಮಹಿಳೆಯರ ವಯಸ್ಸಿಗನುಸಾರ ಸ್ವ-ಸಹಾಯ ಗುಂಪುಗಳೇ ಭಾಗಿಯಾಗಿದ್ದಾರೆಂಬುದು ಕಂಡುಬರುವ ವಿಚಾರವಾಗಿದೆ. ಅದರಲ್ಲಿ ೧೫-೨೦ ವಯಸ್ಸಿನ ಮಹಿಳೆಯರು ಮತ್ತು ೫೦ಕ್ಕಿಂತ ಅಧಿಕ ವಯಸ್ಸು ಇರುವಂತಹ ಮಹಿಳೆಯರು ಕಡಿಮೆ, ಹಿರಿಯರು ಕಂಡುಬರುತ್ತಾರೆ. ಹೆಚ್ಚು ಸ್ವ-ಸಹಾಯ ಗುಂಪುಗಳಲ್ಲಿ ಭಾಗಿಯಾಗಿರುವ ಮಹಿಳೆಯರ ೨೬-೩೫ ವಯಸ್ಸಿನವರು ಮಾತ್ರ ಸ್ವ-ಸಹಾಯ ಗುಂಪುಗಳಲ್ಲಿ ಇರುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ಸ್ವಲ್ಪಮಟ್ಟಿಗೆ ಆರ್ಥಿಕವಾಗಿ ದುರ್ಬಲರಾಗಿರುವ ಬೇಡ ಮಹಿಳೆಯರು ಮಾತ್ರ ಈ ಸ್ವ-ಸಹಾಯ ಗುಂಪುಗಳಲ್ಲಿ ಇದ್ದಾರೆ. ಪ್ರತಿ ಕೇರಿಯ ೪೦ ಮಹಿಳೆಯರನ್ನು ಮಾತ್ರ ಸಂದರ್ಶಿಸಿಯಾಗಿ ಅತಿ ಹೆಚ್ಚು ಸ್ವ-ಸಹಾಯ ಗುಂಪುಗಳಲ್ಲಿ ಭಾಗಿಯಾಗಿರುವುದು ಸಂಖ್ಯೆಯೆಂದರೆ ೨೬-೩೫ ವರ್ಷ ಮಧ್ಯ ವಯಸ್ಸಿನ ಮಹಿಳೆಯರು.

## ಸದಸ್ಯರು ಉದ್ಯೋಗದ ಮಾಹಿತಿಯ ವಿವರ

| ಕ್ರ.ಸಂ. | ಉದ್ಯೋಗ | ಒಟ್ಟು ಸದಸ್ಯರ ಸಂಖ್ಯೆ | ಒಟ್ಟು ಪ್ರತಿಶತ |
|---|---|---|---|
| ೧. | ಕೂಲಿ | ೩೫ | ೫೮.೩. |
| ೨. | ಕೃಷಿ | ೨೩ | ೩೮.೩. |
| ೩. | ಖಾಸಗಿ ನೌಕರಿ | ೦೨ | ೩.೩ |
| ೪. | ವ್ಯಾಪಾರ | ೧೦ | ೧೬.೬ |




ಕಮಲಾಪುರ ಪ್ರತಿ ಕೇರಿಯಲ್ಲಿ ಸ್ವಸಹಾಯ ಗುಂಪುಗಳಲ್ಲಿನ ಎಲ್ಲ ಸಮುದಾಯದವರು ಕೂಡಿಕೊಂಡು ಈ ಗುಂಪುಗಳನ್ನು ನಿರ್ವಹಿಸುತ್ತಿದ್ದಾರೆ. ಅದರಲ್ಲಿ ಬೇಡ ಮಹಿಳೆಯರು ಸೇರಿದ್ದಾರೆ. ಅದರಲ್ಲಿ ಕೆಲವರು ಕೂಲಿ, ಕೆಲವರು ಕೃಷಿ ಕೆಲಸ, ಖಾಸಗಿ ನೌಕರಿ, ವ್ಯಾಪಾರ ಮಾಡುತ್ತಿರುವುದು ಕಂಡುಬಂದಿದೆ.

## ಸ್ವ-ಸಹಾಯ ಗುಂಪುಗಳ ಮುಖಾಂತರ ಬೇಡ ಮಹಿಳೆಯರಿಗೆ ಪಟ್ಟಣ ಪಂಚಾಯಿತಿಯಲ್ಲಿ ದೊರೆತಿರುವ ಮೂಲ ಸೌಕರ್ಯಗಳು

| ಕ್ರ.ಸಂ. | ವಿವರಣೆ | ಬೇಕಾಗುವ ಮೋಟಾರ್ | ಘಂಟೆಗೆ ಸಾಮರ್ಥ್ಯ | ದರ ರಿಯಾಯಿತಿ | ಒಟ್ಟು ಮೊತ್ತ |
|---|---|---|---|---|---|
| ೧. | ಶಾವಿಗೆ ಯಂತ್ರ<br>ಶಾವಿಗೆ ಯಂತ್ರ | ೨.ಎಚ್.ಪಿ.<br>೫.ಎಚ್.ಪಿ. | ೨೦ ಕೆ.ಜಿ.<br>೫೦ ಕೆ.ಜಿ. | ೩೫,೦೦೦<br>೬೫,೦೦೦ | ೧,೦೦,೦೦೦ |
| ೨. | ೭ ಇಂಚು ರವೆ ಮಷಿನ್ ಮತ್ತು ಮೋಟಾರ್ ಸ್ಟ್ಯಾಂಡ್ ಪುಲ್ಲಿ ಮತ್ತು ವ್ಹಿ.ಬೆಲ್ಟ್<br>೧೨ ಇಂಚು ರವೆ ಯಂತ್ರ | ೨ ಎಚ್.ಪಿ.<br>೩ ಎಚ್.ಪಿ. | ೩೫ ಕೆ.ಜಿ.<br>೧೫೦ ಕೆ.ಜಿ. | ೨೦,೦೦೦<br>೩೦,೦೦೦ | ೫೦,೦೦೦ |
| ೩. | ೧೪ ಇಂಚು ಪ್ಲೋರ್ ಮಿಲ್ ಜೊತೆಗೆ ಮೋಟಾರ್ ಸ್ಟ್ಯಾಂಡ್ ಸಾಮರ್ಥ್ಯ ಗಂಟೆಗೆ ೪೦ ರಿಂದ ೪೫ ಕೆ.ಜಿ. | ೩ ಎಚ್.ಪಿ. | ೩೫ ಕೆ.ಜಿ. | ೨೫,೦೦೦ | ೨೫,೦೦೦ |
| ೪. | ಡಿಲಕ್ಸ್ ಹೆವಿಡ್ಯೂಟಿ ೨ ಹಾರೆಯ ಖಾರ ಕುಟ್ಟುವ ಪೌಂಡಿಂಗ್ ಮಷಿನ್ ಆಟೋಮ್ಯಾಟಿಕ್ ಮೂವಿಂಗ್ ಬುಟ್ಟಿ ಮತ್ತು ವೈಬ್ರಟಿಂಗ್ ಜರಡಿಯೊಂದಿಗೆ<br>ಡಿಲಕ್ಸ್ ಹೆವಿಡ್ಯೂಟಿ ೩ ಹಾರೆಯ ಖಾರ ಕುಟ್ಟುವ ಪೌಂಡಿಂಗ್ ಮಷಿನ್ ಆಟೋಮ್ಯಾಟಿಕ್ ಮೂವಿಂಗ್ ಬುಟ್ಟಿ ಮತ್ತು ವೈಬ್ರಟಿಂಗ್ ಜರಡಿಯೊಂದಿಗೆ | ೨.ಎಚ್.ಪಿ.<br>೩.ಎಚ್.ಪಿ. | ೬ ಕೆ.ಜಿ.<br>೧೦ ಕೆ.ಜಿ. | ೩೮,೦೦೦<br>೪೬,೦೦೦ | ೮೪,೦೦೦ |
| ೫. | ೮ ಮೆಣಸಿನ ಕಾಯಿ ಮತ್ತು ಮಸಾಲೆ, ಹರಿಶಿನ ಬೀಸುವ ಯಂತ್ರ | ೨ ಎಚ್.ಪಿ. | ೧೫ ಕೆ.ಜಿ. | ೨೩,೦೦೦ | ೨೩,೦೦೦ |
| ೬. | ಹಪ್ಪಳ, ಚಪಾತಿ ಮತ್ತು ಪೂರಿ ಮಾಡುವ ಯಂತ್ರ | ೦.೫ ಎಚ್.ಪಿ. | ೨೦೦ ಎನ್.ಪಿ. | ೨,೦೦,೦೦೦ | ೨,೦೦,೦೦೦ |
| ೭. | ಆಲೂಗಡ್ಡೆ ಚಿಪ್ಸ್ ಮಾಡುವ ಯಂತ್ರ (೩ ಇನ್ ೧) | ೦.೫ ಎಚ್.ಪಿ. ೨ ನಂ. | ೬೦ ಕೆ.ಜಿ. | ೫೮,೦೦೦ | ೫೮,೦೦೦ |
| ೮. | ರಾಗಿ ಕ್ಲೀನರ್ ಗ್ರೇಡರ್ ಚಾಳನಿಯ ಜೊತೆಗೆ | ೨.೫. ಎಚ್.ಪಿ. | ೪೦೦ ಕೆ.ಜಿ. | ೬೦,೦೦೦<br>೫೫,೦೦೦ | ೧,೧೫,೦೦೦ |

| | | | | | |
|---|---|---|---|---|---|
| | ರಾಗಿ ಬೀಸುವ ಯಂತ್ರ | ೧೦ ಎಚ್.ಪಿ. | | | |
| ೯. | ಕರ್ಪೂರದ ಬಿಲ್ಲೆ ತಯಾರಿಸುವ ಯಂತ್ರ | ೦.೫ ಎಚ್.ಪಿ | ೩೦೦೦ – ೪೦೦೦ ನಂ. | ೪೮,೦೦೦ | ೪೮,೦೦೦ |
| ೧೦. | ಕಬ್ಬಿನ ಹಾಲು ತೆಗೆಯುವ ಯಂತ್ರ | ೧.ಎಚ್.ಪಿ. | | ೪೫,೦೦೦ | ೪೫,೦೦೦ |
| ೧೧. | ಅಡಿಕೆ ಕತ್ತರಿಸುವ ಯಂತ್ರ | ೧.ಎಚ್.ಪಿ. | ೨೫ ಕೆ.ಜಿ. | ೩೫,೦೦೦ | ೩೫,೦೦೦ |
| ೧೨. | ಅಡಿಕೆ ಕತ್ತರಿಸುವ ಯಂತ್ರ | ೧.ಎಚ್.ಪಿ. | ೪೦ ಕೆ.ಜಿ. | ೩೨,೦೦೦ | ೩೨,೦೦೦ |
| ೧೩. | ಬೇಕರಿ ಯಂತ್ರೋಪಕರಣಗಳು<br>೨೫ ಕೆ.ಜಿ. ಹಿಟ್ಟು ಕಲಿಸುವ ಯಂತ್ರ<br>೪೦ ಕೆ.ಜಿ. ಹಿಟ್ಟು ಕಲಿಸುವ ಯಂತ್ರ<br>ಬ್ರೆಡ್ ಕತ್ತರಿಸುವ ಯಂತ್ರ | ೧ ಎಚ್.ಪಿ.<br>೧ ಎಚ್.ಪಿ.<br>೦.೫ ಎಚ್.ಪಿ. | | ೩೨,೦೦೦<br>೩೮,೦೦೦<br>೩೬,೦೦೦ | ೧,೦೪,೦೦೦ |
| ೧೪. | ಜಿಗ್‌ಜಾಗ್ ಹೊಲಿಗೆ ಯಂತ್ರ<br>ಉಷಾ ಸ್ಟಿಕ್ ಮ್ಯಾಜಿಕ್<br>ಉಷಾ ಫ್ಯಾಷನ್ ಸ್ಟಿಕ್<br>ಉಷಾ ಮೈ ಸ್ಟೈಲ್<br>ಬ್ರದರ್ ಎಕ್ಸ್ ೩೬ | | | ೧೫,೫೦೦<br>೧೨,೫೦೦<br>೧೮,೫೦೦<br>೧೫,೦೦೦ | ೭೫,೦೦೦ |

(ಪದ್ಮ ಇಂಡಸ್ಟ್ರೀಯಲ್ ಮತ್ತು ಹೋಂ ನೀಡ್ಸ್ ಸೆಂಟರ್, ೨ನೇ ಕ್ರಾಸ್, ಪಾರ್ವತಿನಗರ, ಬಳ್ಳಾರಿ)

ಈ ಮೇಲಿರುವ ಎಲ್ಲಾ ಉಪಕರಣಗಳನ್ನು ಕೆಲವೊಂದು ರಿಯಾಯತಿಯಲ್ಲಿ ಮಾತ್ರ ಪಡೆದುಕೊಳ್ಳಲು ಸಾಧ್ಯವಾಗಿದೆ. ಅದೇನೆಂದರೆ ಮೆಣಸಿನಕಾಯಿ ಮತ್ತು ರಾಗಿ ಬೀಸುವ ಯಂತ್ರ ಇದು ಬೇಡ ಮಹಿಳೆಗೆ ದೊರೆತಿದೆ ಎಂಬ ಅಂಶ ಸಂದರ್ಶನ ಸಮಯದಲ್ಲಿ ದೊರೆತಿದೆ.

### ೪.೧. ಮಹಿಳಾ ಸಮುದಾಯುದ ಅಭಿವೃದ್ಧಿ ಕಾರ್ಯಕ್ರಮಗಳು

ಜಾಗತೀಕರಣದ ಸಂದರ್ಭದಲ್ಲಿ ಸರ್ಕಾರವು ಮಹಿಳೆಯರನ್ನು ದೃಷ್ಠಿಯಲ್ಲಿಟ್ಟುಕೊಂಡು ಅನೇಕ ಯೋಜನೆಗಳನ್ನು ಹಾಕಿಕೊಂಡಿದೆ. ಈ ಯೋಜನೆಗಳು ತಳ ಸಮುದಾಯದ ಮಹಿಳೆಯರಿಗೆ ತಲುಪುವಲ್ಲಿ ವಿಫಲವಾಗಿರುವುದನ್ನು ನಾವು ಕಾಣಬಹುದಾಗಿದೆ. ಸರಕಾರ ಒದಗಿಸುತ್ತಿರುವ ಸವಲತ್ತುಗಳು ತಳ ಸಮುದಾಯದ ಮಹಿಳೆಯರಿಗೆ ಇನ್ನು ಮುಟ್ಟಲಾರದ ಸ್ಥಿತಿ ಇದೆ. ಸರಕಾರದ ಸೌಲಭ್ಯವನ್ನು ಕೆಲವೊಂದು ಸಮುದಾಯದ ಮಹಿಳೆಯರಿಗೆ ಸಂಘಟನೆಯ ಮುಖಾಂತರ ಅಲ್ಪ ಪ್ರಮಾಣದಲ್ಲಿ ಒದಗಿಸಿಕೊಂಡಿದೆ. ಆರ್ಥಿಕವಾಗಿ, ಸಾಮಾಜಿಕವಾಗಿ,

ಶೈಕ್ಷಣಿಕವಾಗಿ ತುಂಬಾ ಹಿಂದುಳಿದಿರುವ ಬೇಡ ಸಮುದಾಯದ ಮಹಿಳೆಯರು ಸರಕಾರದ ನಿಲುವುಗಳ ಸರಿಯಾಗಿ ಇನ್ನು ಪಡೆಯಲಾರದ್ದಾಗಿದೆ. ಇದರಿಂದಾಗಿ ಈ ಸಮುದಾಯದ ಮಹಿಳೆಯರು ಜಾಗತೀಕರಣದ ಸಂದರ್ಭದಲ್ಲಿ ಹೊಸ ಸಮಸ್ಯೆಗಳಿಗೆ ಬಲಿಯಾಗುತ್ತಿದ್ದಾರೆ. ಇಂತಹ ಹಲವಾರು ಸಮಸ್ಯೆಗಳನ್ನು ಕುರಿತು ಸರಕಾರದ ಬೇಡಿಕೆಗಳನ್ನು ಈಡೇರಿಸಿಕೊಳ್ಳುವುದು ಸಾಧ್ಯವಾಗಲಾರದ್ದಾಗಿದೆ. ಈ ಸಮುದಾಯದ ಸ್ತ್ರೀಯರು ಬಂದಿರುವುದರಿಂದ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದ ಸರಕಾರ ಇವರನ್ನು ಗಮನದಲ್ಲಿಟ್ಟುಕೊಂಡು ಹಲವಾರು ಅಭಿವೃದ್ಧಿ ಕಾರ್ಯಗಳನ್ನು ಮಾಡುತ್ತಲೇ ಬರುತ್ತಿದೆ. ಅಂತಹ ಯೋಜನೆಗಳು ಕೆಲವೊಂದನ್ನು ಇಲ್ಲಿ ಪ್ರಸ್ಥಾಪಿಸಲಾಗುವುದು.

ಮಹಿಳೆಯರ ಕಲ್ಯಾಣ ದೃಷ್ಟಿಯಿಂದಾಗಿ ಬಿಪಿಎಲ್, ಎಪಿಎಲ್, ಎಎವೈ ಕಾರ್ಡ್‌ಗಳನ್ನು ಬಡ ಮಹಿಳೆಯರಿಗೆ ನೀಡಲಾಗಿದೆ. ವಿದ್ಯುತ್ ವ್ಯವಸ್ಥೆ ,ಜನತಾ ಆಶ್ರಯ ಮನೆ ವಿಧವಾ ವೇತನ, ದೇವದಾಸಿ ವೇತನ ವೃದ್ಯಾಪ್ಯ ವೇತನ ಇಂತಹ ಸೌಲಭ್ಯವನ್ನು ಒದಗಿಸಿದ್ದರೂ ಕೂಡ ಬಡತನವನ್ನು ನಿವಾರಣೆ ಮಾಡಲು ಇನ್ನು ಆಗುತ್ತಿಲ್ಲ. ಅದಲ್ಲದೇ ಈ ಸಮುದಾಯದ ಮಹಿಳೆಯರು ಯಾವ ಸಮಸ್ಯೆಯನ್ನು ಕೂಡ ಹೇಳಲಾರದ್ದಾಗಿದೆ. ಬೇಡ ಮಹಿಳೆಯರು ತಮ್ಮ ಕಷ್ಟಗಳನ್ನು ಹೇಳಿಕೊಳ್ಳದಿದ್ದರೆ ಅದಕ್ಕೆ ಪರಿಹಾರ ಕೊಡಲು ಯಾರು ತಾನೇ ಮುಂದೆ ಬರುತ್ತಾರೆ. ಇಂದು ಅನೇಕ ಸಮುದಾಯಗಳು ಅನೇಕ ಸಂಘಟನೆಗಳ ಮುಖಾಂತರ ತಮ್ಮ ಕಷ್ಟಗಳನ್ನು ಸರಕಾರಕ್ಕೆ ತಿಳಿಸುತ್ತಿದ್ದಾರೆ. ಈ ಮೂಲಕ ಸಮಸ್ಯೆಗಳಿಗೆ ಪರಿಹಾರವು ಕೂಡ ಕಂಡುಕೊಳ್ಳಲಾಗಿದೆ.

**ಸರಕಾರದ ಅಭಿವೃದ್ಧಿ ಕಾರ್ಯಕ್ರಮಗಳು**

- ಮಹಿಳೆಯರಿಗೆ ಉದ್ಯೋಗ ಅವಕಾಶ ಕಲ್ಪಿಸುವುದು
- ಬ್ಯಾಂಕ್‌ಗಳು ಮತ್ತು ಇತರ ಹಣಕಾಸು ಸಂಸ್ಥೆಗಳಿಂದ ಸಾಲವನ್ನು ನೀಡುವುದು
- ವ್ಯಾಪಾರ ಮಾಡಲು ಹಣಕಾಸಿನ ಸಹಾಯ ಮಾಡುವುದು.
- ಪಾಲಿಟೆಕ್ನಿಕ್ ಮತ್ತು ಐಟಿಐ ಮಾಡಲು ತಾಂತ್ರಿಕ ವೃತ್ತಿ ಕೌಶಲ್ಯ ವೃದ್ಧಿಸಲು ಮಹಿಳೆಯರಿಗೆ ತರಬೇತಿ ನೀಡುವುದು.
- ಕಂಪ್ಯೂಟರ್ ತಾಂತ್ರಿಕ ಮಾರ್ಗದರ್ಶನ ಸೇವೆಗಳನ್ನು ಕಲ್ಪಿಸುವುದು.
- ಮಹಿಳಾ ಸಂಘಟನೆ ಸಂಘಗಳನ್ನು ಮತ್ತು ಸಂಸ್ಥೆಗಳನ್ನು ಬಲಪಡಿಸುವುದು.
- ಆರ್ಥಿಕ ದುರ್ಬಲಗೊಂಡ ಬಡ ಮಹಿಳೆಯರಿಗೆ ಅಂಗಡಿ ವ್ಯಾಪಾರ ಮಾಡಲು ಸಾಲ ದೊರಕಿಸಿ ಕೊಡುವುದು.

ಸರಕಾರದಿಂದ ಕಮಲಾಪುರ ಪಟ್ಟಣ ಪಂಚಾಯ್ತಿಗೆ ಬಂದ ಅನುದಾನದಿಂದ ಮಹಿಳೆಯರ ಅಭಿವೃದ್ಧಿಗಾಗಿ ಮಾಡಿದ ಕೆಲವೊಂದು ಯೋಜನೆಗಳು:

**ಮಹಿಳೆಯರಿಗೆ ವೃತ್ತಿ ಶಿಕ್ಷಣ ತರಬೇತಿ**

ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ ಮಹಿಳೆಯರಿಗಾಗಿ ಹೊಲಿಗೆ ತರಬೇತಿ ನೀಡುವ ಉದ್ದೇಶದಿಂದ ತರಬೇತಿಗೆ ಪಡೆಯುತ್ತಿರುವವರಿಗೆ ಮಾಸಿಕ ರೂ ೧೫೦ ಗಳನ್ನು ಶಿಷ್ಯವೇತನವನ್ನಾಗಿ ನೀಡಲಾಗುತ್ತಿದೆ ಜೊತೆಗೆ ಇತರ ತರಬೇತಿ ಕೇಂದ್ರಗಳಲ್ಲಿ ತರಬೇತಿ ಪಡೆಯುತ್ತಿರುವವರಿಗೆ ರೂ ೩೦೦ ಗಳಂತೆ ಶಿಷ್ಯವೇತನ ನೀಡಲಾಗುವುದು.

**ಹೊಲಿಗೆ ಯಂತ್ರ ಸರಬರಾಜು**

ಹೊಲಿಗೆ ತರಬೇತಿ ಪೂರ್ಣಗೊಂಡ ಶಿಕ್ಷಕರು ಇಲಾಖೆಯ ಬೊಧಕ ವರ್ಗದವರಿಂದ ಮತ್ತು (ಲೇಡಿ ಲೀಡರ್‌ಗಳಿಂದ) ಇಲಾಖೆ ವತಿಯಿಂದ ಪರೀಕ್ಷೆ ನಡೆಸಿ ತೇರ್ಗಡೆ ಹೊಂದಿಂತಹ ಮಹಿಳೆಯರಿಗೆ ಉಚಿತವಾಗಿ ಹೊಲಿಗೆ ಯಂತ್ರವನ್ನು ನೀಡಲಾಗುತ್ತಿದೆ. ಇದರಲ್ಲಿ ತಿಮ್ಮನಾಥಕೇರಿಯ ೮ ಜನ ಮಹಿಳೆಯರಲ್ಲಿ ಹೊಲಿಗೆಯಂತ್ರ ಪಡೆದವರು ನಾಗಮ್ಮ ಇವರು ಸರಕಾರದಿಂದ ಬಂದಂತಹ ಹೊಲಿಗೆಯಂತ್ರಗಳನ್ನು ತಮ್ಮ ಗುಂಪುಗಳಿಗೆ ನೀಡಿದ್ದಾರೆ. ಇದರಿಂದಾಗಿ ತರಬೇತಿ ಹೊಂದಿದ ಮಹಿಳೆಯರಿಗೆ ಸ್ವತಂತ್ರವಾಗಿ ಬಟ್ಟೆ ಹೊಲಿದು ಆರ್ಥಿಕವಾಗಿ ಸ್ವಾವಲಂಬನೆ ಜೀವನ ನಡೆಸಲು ಸಹಾಯವಾಗುತ್ತಿದೆ.

**ಭಾಗ್ಯಲಕ್ಷ್ಮಿ ಯೋಜನೆ**

ಹೆಣ್ಣು ಮಗು ಹೊರೆಯಲ್ಲ, ಆಕೆಯು ಗಂಡು ಮಗುವಿಗೆ ಸಮಾನ ಎಂದು ಜನರಿಗೆ ಮನದಟ್ಟು ಮಾಡಲು ಕರ್ನಾಟಕ ಸರಕಾರ ೨೦೦೬-೦೭ನೇ ಸಾಲಿನ ಬಜೆಟ್‌ನಲ್ಲಿ [ಅಯ-ವ್ಯಯದಲ್ಲಿ] 'ಭಾಗ್ಯಲಕ್ಷ್ಮಿ' ಎಂಬ ವಿನೂತನ ಯೋಜನೆಯನ್ನು ಜಾರಿಗೆ ತಂದಿದೆ. ಬಡತನದ ರೇಖೆಗಿಂತ ಕೆಳಗಿನ ಅಂದರೆ ಕಡುಬಡವ ಕುಟುಂಬದಲ್ಲಿ ಜನಿಸಿದಂತಹ ಹೆಣ್ಣು ಮಗು ಕೂಡಲೇ ಸರಕಾರ ಆ ಮಗುವಿನ ಹೆಸರಿನಲ್ಲಿ ೧೦,೦೦೦ ರೂಪಾಯಿಗಳನ್ನು ಠೇವಣಿ ಇರಿಸುವ ಮೂಲಕ ಆ ಮಗುವಿನ ಪಾಲಕರ ಆತಂಕವನ್ನು ಹೋಗಲಾಡಿಸುತ್ತೀವೆ. ೨೦೦೬ ಮಾರ್ಚ್ ೩೧ರ ನಂತರ ಹುಟ್ಟಿದ ಹೆಣ್ಣು ಮಗುವಿಗೆ ಈ ಯೋಜನೆ ಲಾಭ/ ಫಲ ಸಿಗುತ್ತದೆ. ಒಂದು ಕುಟುಂಬದಲ್ಲಿ ಜನಿಸಿದ ಒಂದು ಹೆಣ್ಣು ಮಗುವಿಗೆ ಮಾತ್ರ ಯೋಜನೆ ಅನ್ವಯವಾಗುತ್ತದೆ. ಇದರಲ್ಲಿ ಮುಖ್ಯವಾಗಿ ಕಂಡುಬರುವ ಇದು ಬಿಪಿಲ್ ಕಾರ್ಡ್‌ನ್ನು ಹೊಂದಿರುವವರಾಗಿರಬೇಕು.ಮಗು ಜನಿಸಿದ ೧ ವರ್ಷದವರೆಗೆ ಯೊಜನೆಯ ಲಾಭ ಪಡೆಯಲು ಅವಕಾಶವಿದೆ. ಈ ಯೋಜನೆಯನ್ನು ಕಮಲಾಪುರದ ೭ ಕೇರಿಯ ಬೇಡ ಮಹಿಳೆಯರು ಸೌಲಭ್ಯವನ್ನು ಪಡೆಯಲು ಆಗಿಲ್ಲ.

**ವಿಧವೆ ಮತ್ತು ದೇವದಾಸಿಯರ ವಿವಾಹಕ್ಕೆ ನೆರವು**

ನಿರ್ಗತಿಕ ವಿಧವೆಯರು ಮತ್ತು ದೇವದಾಸಿಯರಂತಹ ಅನಿಷ್ಠ ಪದ್ಧತಿಯಲ್ಲಿ ಸಿಲುಕಿದವರು ಜೀವನದ ಮುಖ್ಯ ವಾಹಿನಿಯಲ್ಲಿ ಸೇರಿ ಜೀನವ ನೆಡೆಸಲು ಅನುಕೂಲವಾಗುವಂತೆ ಈ ಸರಕಾರ ನೆರವು ನೀಡಲಾಗುವುದು. ತಿಮ್ಮನಾಥಕೇರಿಯಲ್ಲಿ ದೇವದಾಸಿಯರಾದ ಮಾರೆಮ್ಮ, ನಿಜಲಿಂಗಮ್ಮ ಈ ಮಹಿಳೆಯರು ಪ್ರತಿ ತಿಂಗಳು ವಿಧವೆ ಮತ್ತು ದೇವದಾಸಿಯರ ಸರಕಾರದ ವೇತನವನ್ನು ಜೊತೆಗೆ ದೇವಸ್ಥಾನಕ್ಕೆ ಬಂದಂತಹ ಅನುದಾನವನ್ನು ಕಡಿಮೆ ಪ್ರಮಾಣದಲ್ಲಿ ಪಡೆದಿರುವುದು ಕಂಡುಬರುತ್ತದೆ.

**ಅಮೃತ ಯೋಜನೆ**

ಈ ಯೋಜನೆಯಲ್ಲಿ ವಿಧವೆಯರಿಗೆ ಮತ್ತು ಸಮೀಕ್ಷೆಯಲ್ಲಿ ಗುರುತಿಸಲ್ಪಟ್ಟ ದೇವದಾಸಿ ಮಹಿಳೆಯರಿಗಾಗಿ ಜೀವನಾಧರವಿಲ್ಲದ ನಿರ್ಗತಿಕ ಮಹಿಳೆಯರಿಗೆ ಹಸುಗಳನ್ನು ಸರಕಾರವು ಎಮ್ಮೆಯನ್ನು ಖರೀದಿಸಲು ಸರಕಾರದ ಘಟಕ ವೆಚ್ಚ ರೂ ೨೦,೦೦೦/– ಗಳನ್ನು ಮಹಿಳೆಯರಿಗೆ ನೀಡುವುದು. ಈ ಯೋಜನೆಯನ್ನು ಕಮಲಾಪುರದ ೭ ಕೇರಿಯ ಬೇಡ ಮಹಿಳೆಯರು ಸೌಲಭ್ಯವನ್ನು ಪಡೆಯಲು ಆಗಿಲ್ಲ. ಕಾರಣ ಈ ಕೇರಿಗಳಲ್ಲಿ ಸ್ವಂತ ಪಶುಪಾಲನೆಯಿರುವುದರಿಂದ ಸರಕಾರಕ್ಕೆ ಇದುವರೆಗೂ ಯಾವ ಮಹಿಳೆಯು ಕೂಡ ಅರ್ಜಿಯನ್ನು ಕೊಟ್ಟಿರುವುದಿಲ್ಲ ಎಂಬುದು ಸಂದರ್ಶನದ ಮುಖಾಂತರ ಮಾಹಿತಿಯನ್ನು ಪಡೆಯಲಾಗಿದೆ.

**ಮಹಿಳಾ ತರಬೇತಿ ಯೋಜನೆ**

ಅಸಹಾಯ ಮಹಿಳೆಯರು ಆರ್ಥಿಕವಾಗಿ ಸ್ವಾಲಂಭಿಗಳಾಗಲು ಅವರಲ್ಲಿ ಉದ್ಯಮಶೀಲತೆ ಯನ್ನು ಬೆಳೆಸಿ ಉದ್ಯಮ ಸ್ಥಾಪನೆಗೆ ಉಚಿತವಾಗಿ ಕೌಶಲ್ಯ ತರಬೇತಿ ನೀಡುವುದು. ಈ ಯೋಜನೆಯ ಉದ್ದೇಶ. ಚಿಕ್ಕ ಉದ್ಯಮವನ್ನು ಸ್ವಂತ ಸ್ಥಾಪಿಸಲು ಇಚ್ಛೆಯುಳ್ಳ ಮಹಿಳೆಯರಿಗೆ ಯೋಜನಾ ವರದಿ ತಯಾರಿಕೆ, ಸಾಮಾನ್ಯಲೆಕ್ಕ ಪತ್ರ ನಿರ್ವಹಣೆ, ಕಚ್ಚಾ ಸಾಮಾಗ್ರಿ ನಿರ್ವಹಣೆ, ಮಾರುಕಟ್ಟೆ ಬಗ್ಗೆ ಸರ್ಕಾರ ರೂಡ್‌ಸೆಡ್, ಅರ್ಹ ಸ್ವಯಂ ಸೇವಾ ಸಂಸ್ಥೆಗಳು ಮತ್ತು ನೋಂದಾಣಿಯಾಗಿರುವ ಇತರ ಸರ್ಕಾರೇತರ ಸಂಸ್ಥೆಗಳು ಮೂಲಕ ತರಬೇತಿ ವ್ಯವಸ್ಥೆ ಮಾಡುತ್ತಲೇ ಬಂದಿದೆ. ವಿಧವೆಯರು ಅಸಹಾಯಕ ಮಹಿಳೆಯರು ಹಾಗೂ ಅಂಗವಿಕಲ ಮಹಿಳೆಯರಿಗೆ ಆದ್ಯತೆ ಇದೆ.

ಮಹಿಳೆಯರಿಗೆ ವಾರ್ಷಿಕ ಆದಾಯ ೪೨,೪೧೨ ಮತ್ತು ಇತರೆ ಮಹಿಳೆಯರಿಗೆ ರೂ ೪೦೦೦೦ ಇದ್ದು ಫಲಾನುಭವಿಗಳ ವಯೋಮಿತಿ ೧೮ ರಿಂದ ೪೫ ವರ್ಷಗಳಾಗಿರಬೇಕು. ವಿವಿಧ ಕೌಶಲ್ಯ ತರಬೇತಿಗಳಿಗೆ ನಿಗದಿಯಾಗಿರುವ ವಿದ್ಯಾರ್ಹತೆಯನ್ನು ಫಲಾನುಭವಿಗಳು ಹೊಂದಿರಬೇಕು .

"ಕೈಮಗ್ಗ ಕೈಗಾರಿಕೆಗಳಿಗೆ ಸಹಾಯ:- ಸಣ್ಣ ಕೈಗಾರಿಕೆಗಳಿಗೆ ಸರಕಾರ ನೆರವು ನೀಡಿದ್ದರಿಂದಾಗಿ ಮಹಿಳೆಯರು ಕೆಲಸ ಮಾಡಲು ಸಹಾಯವಾಗಿದೆ. ಬಹುಸಂಖ್ಯಾ ಕೈಮಗ್ಗ ಕುಟುಂಬ ವರ್ಗವು ಬಡವರಾಗಿದ್ದು ಅವರ ಕೈಮಗ್ಗ ಉತ್ಪಾದನೆಯು ಗೃಹ ಕೆಲಸ ಆಗಿವೆ. ಹಾಗೂ ವಿದ್ಯಾಭ್ಯಾಸದ ಮಟ್ಟ ತೀರಾ ಕಡಿಮೆಯಾಗಿರುತ್ತದೆ.ಸರಕಾರ ಇವರಿಗೆ ಇಂತಹ ಅವಕಾಶ ಕಲ್ಪಿಸಿ ಕೊಡುವುದರ ಮೂಲಕ ಸ್ವಾಲಂಬನೆಗೆ ದಾರಿ ಮಾಡಿಕೊಟ್ಟಿದೆ.

ಸರಕಾರ ಮಹಿಳೆಯರ ಸಾವ್ವಲಂಬನೆಗಾಗಿ ಕರಾವಳಿ ಜಿಲ್ಲೆಯಲ್ಲಿ ಬೀಡಿ ಉದ್ಯಮವು ಮುಖ್ಯವಾದ ಉದ್ಯಮವಾಗಿ ಮಹಿಳೆಯರ ಸ್ವಂತ ಪರಿಶ್ರಮವಾಗಿದ್ದು ಜ್ಞಾನವಿಕಾಸ ಮಹಿಳಾ ಕಾರ್ಯಕ್ರಮದ ಯಶಸ್ಸಿನ ಸಂಕೇತವಾಗಿ ಇಂದು "ಸಿರಿ' ಉತ್ಪನ್ನಗಳು ಕರ್ನಾಟಕದ್ಯಾಂತ ಜನಪ್ರಿಯತೆಗೆ ಸರಕಾರವು ನೆರವಾಗಿದೆ. ಇದಕ್ಕೆ ಪೂರಕವಾಗಿ ಮಹಿಳೆಯರು ವಿವಿಧ ಉದ್ಯಮಗಳಲ್ಲಿ ತೊಡಗಿಸಿಕೊಂಡು ಆರ್ಥಿಕ ಪುನಶ್ಚೇತನ ಮತ್ತು ಸ್ವಾವಲಂಬನೆ ಪಡೆಯಲು ಸಾಧ್ಯವಾಯಿತು. "ಸಿರಿ ಇದು ಸ್ವದೇಶಿ ಉದ್ಯಮ".

ರಾಜ್ಯದ ಮಹಿಳೆಯರ ಉದ್ಯಮ ತರಬೇತಿ ಕೇಂದ್ರಗಳು

- ಬೆಂಗಳೂರಿನ ಸಣ್ಣ ಕೈಗಾರಿಕಾ ಸೇವಾ ಸಂಸ್ಥೆ.
- ಮೈಸೂರಿನ ಕೇಂದ್ರೀಯ ಆಹಾರ ತಂತ್ರಜ್ಞಾನ ಸಂಶೋಧನಾ ಸಂಸ್ಥೆ.
- ಬೆಂಗಳೂರಿನ ಭಾರತೀಯ ಫ್ಯೆಆಶನ್ ತಾಂತ್ರಿಕ ಸಂಸ್ಥೆ.

ಮೊದಲಾದ ದೇಶದ ಅಗ್ರಮಾನ್ಯ ತಂತ್ರಜ್ಞಾನ ಸಂಸ್ಥೆಗಳಿಂದ ಮಹಿಳೆಯರಿಗೆ ವಿಶೇಷ ತರಬೇತಿ ನೀಡುವುದು 'ಸಿರಿ' ಸಂಸ್ಥೆಯ ಬೆಳವಣಿಗೆಗೆ ಕೈ ಜೋಡಿಸಿದವರು ಕೇಂದ್ರಸರಕಾರದ ಎಸ್.ಜಿ.ಎಸ್.ವೈ ವಿಶೇಷ ಯೋಜನೆ, ಖಾದಿ ಗ್ರಾಮೋದ್ಯಮ ಸಂಸ್ಥೆ, ನಬಾರ್ಡ್, ಎನ್.ಎಂ.ಬಿ.ಐ, ದಿನನಿತ್ಯ ಉಪಯೋಗಿಸುವ, ಅಗರಬತ್ತಿ, ತಿಂಡಿತಿನಿಸು, ಉಪ್ಪಿನಕಾಯಿ, ಹಪ್ಪಳ, ಜ್ಯೂಸ್, ರಸಂಪುಡಿ, ಸಾಂಬರ್ ಪುಡಿ, ರೆಕ್ಸಿನ್, ಫಿನಾಯಿಲ್, ಈ ಎಲ್ಲವೂ ಮಹಿಳೆಯರು ಈ ಉದ್ಯಮದಲ್ಲಿ ತಯಾರಿಸುತ್ತಾರೆ".[೨]

### ೪.೨. ಬೀಡ ಮಹಿಳೆಯರ ಮಕ್ಕಳ ಶಿಕ್ಷಣದ ಅಭಿವೃದ್ಧಿ ಯೋಜನೆಗಳು

ಯಾವುದೇ ಒಂದು ರಾಷ್ಟ್ರದ ಜನರು ನಾಗರಿಕರಾಗಿ ಸಾಂಸ್ಕೃತಿಕ, ನೈತಿಕ ಮೌಲ್ಯ ಪಡೆಯಬೇಕಾದರೆ ಅಲ್ಲಿ ಶಿಕ್ಷಣದ ಪ್ರಾಮುಖ್ಯತೆ ಇದೆ. ಆರ್ಥಿಕ, ಸಾಮಾಜಿಕ ಒಲವು ಶಿಕ್ಷಣದಿಂದ ನಿರ್ಧಾರವಾಗುತ್ತದೆ. ಶಿಕ್ಷಣ ಮತ್ತು ಸಮಾಜ ಪ್ರತ್ಯೇಕವಾಗಿಲ್ಲ ಇವು ಒಂದನ್ನೊಂದು ಅವಲಂಬಿಸಿದೆ. ವ್ಯಕ್ತಿಯ ಮೇಲೆ ಆರ್ಥಿಕ, ಸಾಮಾಜಿಕ, ರಾಜಕೀಯವಾಗಿ ಹೇಗೆ ಪ್ರಭಾವ ಬೀರುತ್ತಿವೆ ಎಂಬುದನ್ನು ಶಿಕ್ಷಣದ ಮೂಲಕ ಅರ್ಥಮಾಡಿ ಕೊಳ್ಳಬಹುದು. ಇದು ವ್ಯಕ್ತಿಯ

ಅಲೋಚನಾ ಶಕ್ತಿ ಮತ್ತು ವೈಜ್ಞಾನಿಕ ಚಿಂತನೆಗೆ ಓರೆ ಹಚ್ಚುವುದಲ್ಲದೇ ವ್ಯಕಿಯ ಸರ್ವತೋಮುಖ ಬೆಳವಣಿಗೆಗೆ ಸಹಾಯವಾಗುತ್ತಿವೆ. ಶಿಕ್ಷಣವು ಮಕ್ಕಳಿಗೆ ಕೇವಲ ಜ್ಞಾನ ಸಂಪತ್ತಾಗಿದೆ. ಭವಿಷ್ಯದಲ್ಲಿ ಎದುರಿಸಬಹುದಾದ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ನೆರವಾಗುತ್ತದೆ. ಮಕ್ಕಳ ಶಿಕ್ಷಣವನ್ನು ಅಭಿವೃದ್ಧಿ ಪಡಿಸಲೆಂದು ಸರಕಾರ ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಳ್ಳುತ್ತಿದೆ. ಅದರಲ್ಲಿ

- ಜನಶಾಲಾ ಕಲ್ಯಾಣ
- ಚೈತನ್ಯ ಕಾರ್ಯಕ್ರಮ
- ಚಿಣ್ಣರ ಅಂಗಳ
- ಬಾ ಮರಳಿ ಶಾಲೆಗೆ
- ಕೂಲಿಯಿಂದ ಶಾಲೆಗೆ
- ವಿದ್ಯಾಚೇತನ ಸಮನ್ವಯ ಶಿಕ್ಷಣ ಹೀಗೆ ಇಂತಹ ಕಾರ್ಯಕ್ರಮಗಳ ಮೂಲಕ

ಮಕ್ಕಳ ಶಾಲೆಗೆ ಕರೆತರುವ ಪ್ರಯತ್ನವನ್ನು ಮಾಡುತ್ತಿವೆ. ಇದರಲ್ಲಿ ಮಕ್ಕಳ ಹಿತದೃಷ್ಠಿ ಉನ್ನತ ವಿಧ್ಯಾಭ್ಯಾಸಕ್ಕಾಗಿ ಸರಕಾರ ಕೈಗೊಂಡಿರುವ ಮುಖ್ಯ ಕಾರ್ಯಕ್ರಮಗಳೆಂದರೆ

**ನರ್ಸರಿ ಮತ್ತು ಕಲ್ಯಾಣ ಕೇಂದ್ರಗಳು**

ಮಕ್ಕಳು ಪ್ರಾರಂಭದಲ್ಲಿಯೇ ಶಾಲೆಗೆ ಹೋಗುವ ಅಭ್ಯಾಸ ರೂಡಿಸಲು ಈ ಯೋಜನೆಯನ್ನು ಜಾರಿಗೊಳಿಸಲಾಗಿದೆ. ೩ ರಿಂದ ೫ ವರ್ಷ ವಯಸ್ಸಿನ ಮಕ್ಕಳು ಇಂತಹ ಕೇಂದ್ರಗಳಲ್ಲಿ ಪ್ರವೇಶ ಪಡೆಯುತ್ತಿದ್ದಾರೆ. ಪ್ರತಿಯೊಂದು ನರ್ಸರಿ ಕೇಂದ್ರದಲ್ಲಿ ಮಕ್ಕಳ ಯೋಗಕ್ಷೇಮ ನೋಡಿಕೊಳ್ಳಲು ಇಬ್ಬರು ನೌಕರರು ಇರುತ್ತಾರೆ. ಮಕ್ಕಳಿಗೆ ಮಧ್ಯಾಹ್ನದ ಉಪಹಾರವನ್ನು ಈ ಶಾಲೆಗಳಲ್ಲಿ ನೀಡಲಾಗುವುದು. ಚೌಡಿಕೇರಿ ಮತ್ತು ಬಂಡೇಕೇರಿಯ ಬೇಡ ಮಹಿಳೆಯರ ಮಕ್ಕಳು ಅಂಗನವಾಡಿಯ ಶಾಲೆಗೆ ಹೋಗುತ್ತಿದ್ದಾರೆ. ನರ್ಸರಿ ಮತ್ತು ಕಲ್ಯಾಣ ಕೇಂದ್ರಗಳ ಬಗ್ಗೆ ಬೇಡ ಮಹಿಳೆಯರಿಗೆ ಇವುಗಳ ಅರಿವು ಇಲ್ಲದ ಕಾರಣ ತಮ್ಮ ಮಕ್ಕಳನ್ನು ಇಂತಹ ಶಾಲೆಗಳಿಂದ ವಂಚಿತರನ್ನಾಗಿಸುತ್ತಾರೆ.

**ಮೆಟ್ರಿಕ್‌ಪೂರ್ವ ವಿದ್ಯಾರ್ಥಿ ನಿಲಯಗಳು**

ಬುಡಕಟ್ಟು, ಪರಿಶಿಷ್ಟ ಜಾತಿಗೆ ಸೇರಿದ ಮಕ್ಕಳ ವಿದ್ಯಾಭ್ಯಾಸ ನೀಡುವ ಸಲುವಾಗಿ ಮೆಟ್ರಿಕ್‌ಪೂರ್ವ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಲಾಗಿದೆ. ೫ ರಿಂದ ೧೦ನೇ ತರಗತಿವರೆಗೂ ವ್ಯಾಸಂಗ ಮಾಡುವ ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೆ ಪ್ರತ್ಯೇಕವಾದಂತಹ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಲಾಗಿದೆ. ಪ್ರತಿಯೊಂದು ವಿದ್ಯಾರ್ಥಿ ನಿಲಯದಲ್ಲಿ ಮೇಲ್ವಿಚಾರಕರು, ಅಡುಗೆಯವರು, ಅಡುಗೆ ಸಹಾಯಕರು, ಕಾವಲುಗಾರರು ಇರುತ್ತಾರೆ. ಈ ವಿದ್ಯಾರ್ಥಿ

ನಿಲಯಗಳಲ್ಲಿ ಮಾಸಿಕವಾಗಿ ಪ್ರತಿ ವಿದ್ಯಾರ್ಥಿಗೆ ಹಣವನ್ನು(೭೫೦ರೂ) ಸರಕಾರವೇ ಭರಿಸುತ್ತದೆ. ಪ್ರತಿ ಶೈಕ್ಷಣಿಕ ವರ್ಷದ ಆರಂಭದಲ್ಲಿ ಅರ್ಜಿಗಳನ್ನು ಆಹ್ವಾನಿಸುವುದರ ಮೂಲಕ ಅರ್ಜಿ ಪಡೆದ ಫಲಿತಾಂಶದ ಆಧಾರದ ಮೇಲೆ ಅರ್ಜಿಗಳನ್ನು ತಾಲೂಕು ಮಟ್ಟದ ಆಯ್ಕೆ ಸಮಿತಿಯ ಮೂಲಕ ಆಯ್ಕೆ ಮಾಡಿ ಪ್ರಕಟಿಸಲಾಗುವುದು. ಇಲ್ಲಿ ಬೇಡ ಮಹಿಳೆಯರ ಮಕ್ಕಳು ಹಾಸ್ಟೆಲ್‌ಗಳಲ್ಲಿ ಇದ್ದು ಓದುವುದು ತುಂಬಾ ಕಡಿಮೆ ಎಂಬುದು ಕ್ಷೇತ್ರಕಾರ್ಯದ ಮೂಲಕ ಕಂಡುಕೊಳ್ಳಲಾಗಿದೆ.

**ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯ**

ಮೆಟ್ರಿಕ್‌ನಂತರ ಹೆಚ್ಚಿನ ವಿದ್ಯಾಭ್ಯಾಸ ಪಡೆಯುವ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗಾಗಿ ಮಾಸಿಕ ರೂ.೮೫೦ ವೆಚ್ಚದಲ್ಲಿ ಊಟದ ವ್ಯವಸ್ಥೆಯನ್ನು ಕೂಡಲಾಗುತ್ತಿದೆ.

**ಮುರಾರ್ಜಿ ದೇಸಾಯಿ ವಸತಿ ಶಾಲೆಗಳು**

ರಾಜ್ಯ ಸರಕಾರವು ಈ ಯೋಜನೆಯನ್ನು ೧೯೯೬-೧೯೯೭ನೇ ಸಾಲಿನಲ್ಲಿ ಚಾಲನೆ ನೀಡಿತು. ಇಲ್ಲಿ ವಿದ್ಯಾರ್ಥಿಗಳ ಮತ್ತು ವಿದ್ಯಾರ್ಥಿನಿಯರ ಪ್ರವೇಶಾನುಪಾತ ೫೦:೫೦ ಆಗಿರುತ್ತದೆ. ಪ್ರವೇಶ ಪರೀಕ್ಷೆಯನ್ನು ಯಶಸ್ವಿಯಾಗಿ ಪೂರೈಸಿದ ಮಕ್ಕಳಿಗೆ ಇಲ್ಲಿ ಪ್ರವೇಶ ನೀಡಲಾಗುತ್ತದೆ. ೧೦ನೇ ತರಗತಿವರೆಗೆ ವಿದ್ಯಾರ್ಥಿಗಳಿಗೆ ಉಚಿತ ವಸತಿ ಜೊತೆ ಊಟದ ವೆಚ್ಚಕ್ಕಾಗಿ ೫೦೦ರೂ.ಗಳ ಮಾಸಿಕ ವೆಚ್ಚವಾಗಿ ಉಚಿತ ಪಠ್ಯಪುಸ್ತಕ, ಸಮವಸ್ತ್ರಗಳನ್ನು ನೀಡಲಾಗುತ್ತದೆ.

**ಶಿಕ್ಷಣಕ್ಕೆ ಉತ್ತೇಜನ**

ಅನುದಾನಿತ ವಿದ್ಯಾರ್ಥಿ ನಿಲಯಗಳನ್ನು ನಡೆಸುವ ಸ್ವಯಂ ಸೇವಾ ಸಂಘಗಳು ಸಹ ಬಡ ಮಕ್ಕಳಿಗೆ ಶಿಕ್ಷಣಕ್ಕೆ ಉತ್ತೇಜನ ನೀಡುವಂತೆ ಖಾಸಗಿ ವಿದ್ಯಾರ್ಥಿ ನಿಲಯಗಳಿಗೂ ಅನುದಾನ ನೀಡಲಾಗುತ್ತಿದೆ. ಖಾಸಗಿ ವಿದ್ಯಾರ್ಥಿ ನಿಲಯಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ವಿದ್ಯಾರ್ಥಿಗಳಿಗೆ ಮೀಸಲಾತಿ ಕಲ್ಪಿಸಲಾಗಿದೆ. ಗರಿಷ್ಠ ರೂ. ೨೫,೦೦೦ಗಳವರೆಗೆ ಅನುದಾನ ನೀಡಲು ಪರಿಶಿಷ್ಟ ವರ್ಗಗಳ ಇಲಾಖೆಯವರಿಗೆ ಅಧಿಕಾರವಿರುತ್ತದೆ. ಅದಕ್ಕೂ ಮೀರಿದ್ದರೆ ಅದನ್ನು ಸರಕಾರ ಪರಿಶೀಲನೆ ಮಾಡಿ ಅನುದಾನ ನೀಡುತ್ತದೆ. ಇದುವರೆಗೆ ತಿಮ್ಮನಾಥಕೇರಿಯಲ್ಲಿ ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡ ಮಾಹಿತಿಯ ಆಧಾರದ ಮೇಲೆ ಒಬ್ಬ ಹುಡುಗ ಮಾತ್ರ ರ್‍ಯಾಂಕ್‌ನ್ನು ಗಳಿಸಿರುವ ಮುಖಾಂತರ ಪರಿಶಿಷ್ಟ ಪಂಗಡದ ಇಲಾಖೆ ವತಿಯಿಂದ ರೂ.೨೫,೦೦೦/-ಗಳನ್ನು ಪಡೆದು ಕೊಂಡಿರುವುದು ತಿಳಿದುಬಂದಿದೆ.

**ನವೋದಯ ಶಾಲೆಗಳು**

ಉತ್ತಮ ವಿದ್ಯಾಭ್ಯಾಸ ನೀಡಲು ನವೋದಯ ಶಾಲೆಗಳಲ್ಲಿ ಅವಕಾಶ ಕಲ್ಪಿಸಲಾಗಿದೆ. ಇದು ರಾಜ್ಯ ಸರಕಾರ ಪ್ರಾಯೋಜಿತ ಕಾರ್ಯಕ್ರಮವಾಗಿದ್ದು ಇಲ್ಲಿ ೬ ರಿಂದ ೧೦ನೇ ತರಗತಿವರೆಗೂ ಶಿಕ್ಷಣ ನೀಡಲಾಗುತ್ತದೆ. ಪೂರ್ವಭಾವಿ ಪರೀಕ್ಷೆಯನ್ನು ನಡೆಸಿ ಅದರಲ್ಲಿ ಗಳಿಸಿದ ಅಂಕಗಳ

ಅನುಸಾರ ಮೀಸಲಾತಿಗೆ ಅನುಗುಣವಾಗಿ ಪ್ರವೇಶವನ್ನು ೫೦ ಗಂಡು ೫೦ ಹೆಣ್ಣು ಈ ಅನುಪಾತದಲ್ಲಿ ನೀಡಲಾಗುತ್ತದೆ. ಈ ಶಾಲೆಗಳಲ್ಲಿ ಉಚಿತ ಊಟ ಮತ್ತು ವಸತಿ ಸೌಲಭ್ಯ ಇರುತ್ತದೆ.

**ವಿದ್ಯಾರ್ಥಿ ವೇತನಗಳು**

ಮೆಟ್ರಿಕ್‌ಪೂರ್ವ ವಿದ್ಯಾರ್ಥಿ ವೇತನವಾಗಿ ೧ ರಿಂದ ೭ನೇ ತರಗತಿವರೆಗೆ ಪಜಾ.ಪಪಂ. ಮಕ್ಕಳಿಗೆ ರೂ.೭೫ ಹಾಗೂ ೮ ರಿಂದ ೧೦ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ಗಂಡು ಮಕ್ಕಳಿಗೆ ೩೦೦ ಹೆಣ್ಣು ಮಕ್ಕಳಿಗೆ ೪೨೦ ಗಳನ್ನು ನೀಡುತ್ತಿವೆ. ರೂ.೫೦೦ಗಳನ್ನು ಹೆಚ್ಚಿಸಲು ಉದ್ದೇಶಿಸಲಾಗಿದೆ.

**ಪ್ರತಿಭಾ ವಿದ್ಯಾರ್ಥಿ ವೇತನ**

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಮಕ್ಕಳಿಗೆ ಆರೋಗ್ಯಕರ ಸ್ಪರ್ಧಾ ಮನೋಭಾವ ತುಂಬಲು ಪ್ರತಿಭಾ ವಿದ್ಯಾರ್ಥಿ ವೇತನ ನೀಡಲಾಗುತ್ತಿದೆ. ವಾರ್ಷಿಕ ಪರೀಕ್ಷೆಯಲ್ಲಿ ಶೇ.೬೦%ಕ್ಕಿಂತ ಹೆಚ್ಚು ಅಂಕ ಪಡೆದ ೧೦ನೇ ತರಗತಿ ವಿದ್ಯಾರ್ಥಿಗಳಿಗೆ ಪ್ರತಿಭಾ ವಿದ್ಯಾರ್ಥಿ ವೇತನಕ್ಕೆ ಅರ್ಹರಾಗಿರುತ್ತಾರೆ. ಈ ಒಂದು ಸೌಲಭ್ಯವನ್ನು ಚೌಡಿಕೇರಿ ಮತ್ತು ತಿಮ್ಮನಾಥಕೇರಿ ೨೫ ಜನ ೧೦ನೇ ತರಗತಿಯಲ್ಲಿ ಪ್ರತಿಭಾ ವೇತನವನ್ನು ಪಡೆದಿರುತ್ತಾರೆ.

**ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಧನ**

ಎಸ್.ಎಸ್.ಎಲ್.ಸಿ. ವಾರ್ಷಿಕ ಪರೀಕ್ಷೆಯಲ್ಲಿ ಶೇ. ೬೦%ಕ್ಕಿಂತ ಹೆಚ್ಚು ಅಂಕ ಗಳಿಸಿದ ವಿದ್ಯಾರ್ಥಿಗಳಿಗೆ ೫,೦೦೦/- ಹಾಗೂ ಶೇ.೭೫%ಕ್ಕಿಂತ ಹೆಚ್ಚು ಅಂಕ ಗಳಿಸಿದ ವಿದ್ಯಾರ್ಥಿಗಳಿಗೆ ರೂ.೧೦,೦೦೦/- ಪ್ರೋತ್ಸಾಹಧನ ಮಂಜೂರು ಮಾಡಲಾಗುತ್ತಿದೆ. ಇತ್ತೀಚಿಗೆ ಖಾಸಗಿ ಶ್ರೀಮಂತರು ಹೆಚ್ಚು ಅಂಕಗಳಿಸಿದ ಬಡ ಮಕ್ಕಳಿಗೆ ಶಿಕ್ಷಣ ಅಭಿವೃದ್ಧಿ ಆರ್ಥಿಕ ನೆರವನ್ನು ನೀಡುತ್ತಿದ್ದಾರೆ. ೨೦೧೫-೧೬ನೇ ಸಾಲಿನ ಪಟ್ಟಣ ಪಂಚಾಯಿತಿ ಪರಿಶಿಷ್ಟ ವರ್ಗ ಮತ್ತು ಪರಿಶಿಷ್ಟ ಪಂಗಡದ ವತಿಯಿಂದ ೨೫ ವಿದ್ಯಾರ್ಥಿಗಳು ಪ್ರೋತ್ಸಾಹ ಧನವನ್ನು ಪಡೆದಿದ್ದಾರೆ.

**ಪ್ರತಿಷ್ಠಿತ ಶಾಲೆಗಳಲ್ಲಿ ದಾಖಲು**

ಆರ್ಥಿಕವಾಗಿ ಹಿಂದುಳಿದ ಪರಿಶಿಷ್ಟ ವರ್ಗದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ರಾಜ್ಯದ್ಯಾಂತ ಇರುವ ಪ್ರತಿಷ್ಠಿತ ಶಾಲೆಗಳಲ್ಲಿ ಪ್ರವೇಶ ನೀಡಿ ವಾರ್ಷಿಕ ಆರ್ಥಿಕ ವೆಚ್ಚ ಭರಿಸಲಾಗುತ್ತದೆ. ಈ ಯೋಜನೆಯು ಪ್ರಯೋಜನೆ ಪಡೆಯಲು ವಿದ್ಯಾರ್ಥಿಯ ಪೋಷಕರು ವಾರ್ಷಿಕ ಆದಾಯ ರೂ.೨೫,೦೦೦/- ಮಿತಿಯಲ್ಲಿರಬೇಕು.

**ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ**

ಭಾರತ ಸರ್ಕಾರದ ನಿಬಂಧನೆ ಮೇರೆಗೆ ಎಲ್ಲ ಪರಿಶಿಷ್ಟ ವರ್ಗದ ವಿದ್ಯಾರ್ಥಿ ವೇತನ ಪಡೆಯಲು ಅರ್ಹರಾಗಿರುತ್ತಾರೆ. ವಿದ್ಯಾರ್ಥಿಗಳ ಕುಟುಂಬದ ವರಮಾನ ರೂ.೧,೪೫,೦೦೦/- ಮೀರದಿದ್ದರೆ ಆ ವಿದ್ಯಾರ್ಥಿ ವೇತನಕ್ಕೆ ಅರ್ಹರಾಗಿರುತ್ತಾರೆ.

**ನಗದು ಬಹುಮಾನ**

ಪರಿಶಿಷ್ಟ ವರ್ಗಕ್ಕೆ ಸೇರಿದ ವಿದ್ಯಾರ್ಥಿಗಳು ಪಬ್ಲಿಕ್ ಪರೀಕ್ಷೆಗಳಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರೆ ಈ ಕೆಳಕಂಡಂತೆ ನಗದು ಬಹುಮಾನವನ್ನು ಸರ್ಕಾರದಿಂದ ಪಡೆಯುತ್ತಾರೆ.

ದ್ವಿತಿಯ ಪಿ.ಯು.ಸಿ. ರೂ.೨೦೦೦೦/-

ಎಂ.ಎ., ಎಂ.ಕಾಂ, ಎಂ.ಎಸ್ಸಿ ರೂ.೩೦೦೦೦/-

ಎಂ.ಬಿ.ಬಿ.ಎಸ್, ಇಂಜಿನಿಯರಿಂಗ್ ರೂ.೩೫,೦೦೦/- ಈ ರೀತಿಯಾಗಿ ನಗದು ಬಹುಮಾನಕ್ಕೆ ಅರ್ಹರಾಗುತ್ತಾರೆ.

**ಪಿಎಚ್.ಡಿ. ವಿದ್ಯಾರ್ಥಿಗಳಿಗೆ ಫೆಲೋಶಿಫ್**

ರಾಜ್ಯದಲ್ಲಿ ವಿವಿಧ ವಿಶ್ವವಿದ್ಯಾನಿಲಯದಲ್ಲಿ ಸಂಶೋಧನೆಯಲ್ಲಿ ತೊಡಗಿರುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಸಂಶೋಧನಾ ಮಾಹಿತಿ ಸಂಗ್ರಹಣೆಗೆ ವೆಚ್ಚ ಬರಿಸಲು ಯುಜಿಸಿಯಿಂದ ಹಾಗೂ ವಿಶ್ವವಿದ್ಯಾಲಯಗಳ ಯೋಜನೆಗಳಿಗನುಗುಣವಾಗಿ ಶಿಷ್ಯವೇತನ ನೀಡಲಾಗುವುದು. ಕಮಲಾಪುರದಲ್ಲಿ ಪಿಎಚ್.ಡಿ. ಹಾಗೂ ಎಂ.ಫಿಲ್ ವಿದ್ಯಾರ್ಥಿಗಳ ಸಂಖ್ಯೆ ೫ರಲ್ಲಿ ೩ ವಿದ್ಯಾರ್ಥಿಗಳು, ೨ ವಿದ್ಯಾರ್ಥಿನಿಯರು ಪಿಎಚ್.ಡಿ. ಫೆಲೋಶಿಪ್ ಅನ್ನು ಪಡೆಯುತ್ತಿದ್ದಾರೆ.

**ಅಧ್ಯಯನ ಪ್ರವಾಸಕ್ಕೆ ನೆರವು**

ತಾಂತ್ರಿಕ ಮತ್ತು ವೃತ್ತಿಪರ ಕೋರ್ಸ್‌ಗಳಲ್ಲಿ ಅಧ್ಯಯನ ಮಾಡುತ್ತಿರುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಪ್ರವಾಸ ಕಡ್ಡಾಯವಾಗಿದ್ದು ಅಂತಹ ಪ್ರವಾಸ ಕೈಗೊಳ್ಳಲು ವಿದ್ಯಾರ್ಥಿಗಳಿಗೆ ಧನ ಸಹಾಯ ಮಾಡುವುದು.

**ತರಬೇತಿ**

ಪರಿಶಿಷ್ಟ ವರ್ಗದ ವಿದ್ಯಾವಂತ ನಿರುದ್ಯೋಗಿ ಯುವಕ/ಯುವತಿಯರಿಗೆ ಸ್ವಯಂ ಉದ್ಯೋಗ ಕೈಗೊಳ್ಳಲು ತರಬೇತಿ ನೀಡಲಾಗುತ್ತದೆ.

**ಇಂಜನಿಯರಿಂಗ್ ವಿದ್ಯಾರ್ಥಿಗಳಿಗೆ ಸಾಧನ ಸಲಕರಣೆಗಳ ಸರಬರಾಜು**

ತಾಂತ್ರಿಕ ಮತ್ತು ವೃತ್ತಿಪರ ಕೋರ್ಸ್‌ಗಳಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ತಾಂತ್ರಿಕ ಸಲಕರಣೆಗಳನ್ನು ಸರ್ಕಾರವು ಸರಬರಾಜು ಮಾಡುತ್ತಿದೆ.

**ಇತರೆ ಸೌಲಭ್ಯಗಳು**

೧. ಪರಿಶಿಷ್ಟ ಪಂಗಡಕ್ಕೆ ಸೇರಿದ ವಿದ್ಯಾರ್ಥಿಗಳಿಗೆ ಧನ ಸಹಾಯ

೨. ಉನ್ನತ ವ್ಯಾಸಂಗಕ್ಕೆ ಸ್ಕಾಲರ್‌ಶಿಪ್

೩. ವಿದೇಶಕ್ಕೆ ಹೋಗಿ ಅಧ್ಯಯನ ಮಾಡಲು ಅವಕಾಶ

೪. ಐ.ಎ.ಎಸ್, ಕೆ.ಎ.ಎಸ್ ಪರೀಕ್ಷೆಗಳ ಉಚಿತ ತರಬೇತಿ

ಈ ಎಲ್ಲಾ ಸೌಲಭ್ಯಗಳನ್ನು ಸರ್ಕಾರವು ನೀಡಿದರೂ ಸಹ ಬೇಡ ಮಹಿಳೆಯರು ಅವುಗಳಿಂದ ಆಚೆಗೆ ಉಳಿದಿದ್ದಾರೆ ಎಂದರೆ ಅತಿಶಯೋಕ್ತಿ ಎನಿಸದು. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಈ ಎಲ್ಲ ಮಾಹಿತಿಯನ್ನು ಸಮಾಜ ಕಲ್ಯಾಣ ಇಲಾಖೆ ವತಿಯಿಂದ ಪಡೆಯಲಾಗಿದೆ.

**೨೦೧೫–೧೬ನೇ ಸಾಲಿನ ಕಮಲಾಪುರದ ಬೇಡ ಮಹಿಳೆಯರ ಮಕ್ಕಳ ಶೈಕ್ಷಣಿಕ ಅನುಪಾತ**
**ಸರಕಾರಿ ಬಾಲಕ – ಬಾಲಕಿಯರ ಪ್ರೌಢಶಾಲೆ, ಕಮಲಾಪುರ**

| ತರಗತಿಗಳು | ಪರಿಶಿಷ್ಟ ಪಂಗಡದ ಪುರುಷ ವಿದ್ಯಾರ್ಥಿಗಳು | ಪರಿಶಿಷ್ಟ ಪಂಡಗದ ಮಹಿಳಾ ವಿದ್ಯಾರ್ಥಿನಿಯರು | ಒಟ್ಟು ವಿದ್ಯಾರ್ಥಿ/ ವಿದ್ಯಾರ್ಥಿನಿಯರು |
|---|---|---|---|
| ೮ನೇ ತರಗತಿ | ೧೦ | ೨೩ | ೩೩ |
| ೯ನೇ ತರಗತಿ | ೨೧ | ೫೪ | ೭೫ |
| ೧೦ನೇ ತರಗತಿ | ೫೧ | ೪೦ | ೯೧ |
| | ೮೨ | ೧೧೭ | ೧೯೯ |

**ಸರಕಾರಿ ಪದವಿಪೂರ್ವ ಕಾಲೇಜು, ಕಮಲಾಪುರ**

| ತರಗತಿಗಳು | ಪರಿಶಿಷ್ಟ ಪಂಗಡ ಪುರುಷ ವಿದ್ಯಾರ್ಥಿಗಳು | ಪರಿಶಿಷ್ಟ ಪಂಗಡ ವಿದ್ಯಾರ್ಥಿನಿಯರು | ಒಟ್ಟು ವಿದ್ಯಾರ್ಥಿ/ ವಿದ್ಯಾರ್ಥಿನಿಯರು |
|---|---|---|---|
| ಪ್ರಥಮ ವರ್ಷ ಕಲಾ | ೧೮ | ೧೮ | ೩೬ |
| ಪ್ರಥಮ ವರ್ಷ ವಾಣಿಜ್ಯ | ೧೧ | ೦೬ | ೧೭ |
| ಪ್ರಥಮ ವರ್ಷ ವಿಜ್ಞಾನ | ಇಲ್ಲ | ಇಲ್ಲ | ಇಲ್ಲ |
| | ೨೯ | ೨೪ | ೫೫ |

## ಸರಕಾರಿ ಪದವಿಪೂರ್ವ ಕಾಲೇಜು, ಕಮಲಾಪುರ

| ತರಗತಿಗಳು | ಪರಿಶಿಷ್ಟ ಪಂಗಡದ ಪುರುಷ ವಿದ್ಯಾರ್ಥಿಗಳು | ಪರಿಶಿಷ್ಟ ಪಂಡಗದ ಮಹಿಳಾ ವಿದ್ಯಾರ್ಥಿನಿಯರು | ಒಟ್ಟು ವಿದ್ಯಾರ್ಥಿ/ ವಿದ್ಯಾರ್ಥಿನಿಯರು |
|---|---|---|---|
| ದ್ವಿತೀಯ ವರ್ಷ ಕಲಾ | ೦೩ | ೦೫ | ೦೮ |
| ದ್ವಿತೀಯ ವರ್ಷ ವಾಣಿಜ್ಯ | ೦೪ | ೦೫ | ೦೯ |
| ದ್ವಿತೀಯ ವರ್ಷ ವಿಜ್ಞಾನ | ಇಲ್ಲ | ಇಲ್ಲ | ಇಲ್ಲ |
| | ೦೭ | ೧೦ | ೧೭ |

## ರಾಮಕೃಷ್ಣ ಆಂಗ್ಲ ಮಾಧ್ಯಮ ಶಾಲೆ, ಕಮಲಾಪುರ

| ತರಗತಿಗಳು | ಪರಿಶಿಷ್ಟ ಪಂಗಡದ ಪುರುಷ ವಿದ್ಯಾರ್ಥಿಗಳು | ಪರಿಶಿಷ್ಟ ಪಂಡಗದ ಮಹಿಳಾ ವಿದ್ಯಾರ್ಥಿನಿಯರು | ಒಟ್ಟು ವಿದ್ಯಾರ್ಥಿ/ ವಿದ್ಯಾರ್ಥಿನಿಯರು |
|---|---|---|---|
| ೧ನೇ ತರಗತಿ | ೦೧ | ೦೧ | ೦೨ |
| ೨ನೇ ತರಗತಿ | ೦೧ | ೨ | ೦೩ |
| ೩ನೇ ತರಗತಿ | ೦೩ | ೦ | ೦೩ |
| ೪ನೇ ತರಗತಿ | ೧ | ೧ | ೦೨ |
| ೫ನೇ ತರಗತಿ | ೧ | ೧ | ೦೨ |
| ೬ನೇ ತರಗತಿ | – | – | – |
| ೭ನೇ ತರಗತಿ | ೧ | ಇಲ್ಲ | ೨ |

## ಸಿದ್ದೇಶ್ವರ ಸರಕಾರಿ ಪ್ರಾಥಮಿಕ ಶಾಲೆ, ಕಮಲಾಪುರ

| ತರಗತಿಗಳು | ಪರಿಶಿಷ್ಟ ಪಂಗಡದ ಪುರುಷ ವಿದ್ಯಾರ್ಥಿಗಳು | ಪರಿಶಿಷ್ಟ ಪಂಡಗದ ಮಹಿಳಾ ವಿದ್ಯಾರ್ಥಿನಿಯರು | ಒಟ್ಟು ವಿದ್ಯಾರ್ಥಿ/ ವಿದ್ಯಾರ್ಥಿನಿಯರು |
|---|---|---|---|
| ೧ನೇ ತರಗತಿ | ೩೧ | ೩೧ | ೬೨ |
| ೨ನೇ ತರಗತಿ | ೩೯ | ೪೯ | ೮೮ |
| ೩ನೇ ತರಗತಿ | ೩೮ | ೨೪ | ೬೨ |
| ೪ನೇ ತರಗತಿ | ೧೬ | ೨೮ | ೪೪ |
| ೫ನೇ ತರಗತಿ | ೨೨ | ೧೮ | ೪೦ |
| ೬ನೇ ತರಗತಿ | ೨೬ | ೨೦ | ೪೬ |
| ೭ನೇ ತರಗತಿ | ೨೬ | ೨೬ | ೫೪ |
| ೮ನೇ ತರಗತಿ | ೩೪ | ೨೯ | ೬೩ |

**ವಿರುಪಾಕ್ಷೇಶ್ವರ ಪದವಿ ಮಹಾವಿದ್ಯಾಲಯ, ಕಮಲಾಪುರ**

| ತರಗತಿಗಳು | ಪರಿಶಿಷ್ಟ ಪಂಗಡದ ಪುರುಷ ವಿದ್ಯಾರ್ಥಿಗಳು | ಪರಿಶಿಷ್ಟ ಪಂಗಡದ ಮಹಿಳಾ ವಿದ್ಯಾರ್ಥಿನಿಯರು | ಒಟ್ಟು ವಿದ್ಯಾರ್ಥಿ/ ವಿದ್ಯಾರ್ಥಿನಿಯರು |
|---|---|---|---|
| ಪ್ರಥಮ ಬಿ.ಎ. | ೩೪ | ೨೨ | ೫೬ |
| ದ್ವಿತೀಯ ಬಿ.ಎ. | ೩೦ | ೧೮ | ೪೮ |
| ತೃತೀಯ ಬಿ.ಎ. | ೧೫ | ೧೪ | ೨೯ |

**೪.೩. ಬೇಡ ಮಹಿಳೆಯರ ಸಮಸ್ಯೆಗಳು**

ಪ್ರಸ್ತುತ ಸಮಾಜದಲ್ಲಿ ನಡೆಯುತ್ತಿರುವ ಹಿಂಸೆ, ಕಿರುಕುಳ, ವರದಕ್ಷಿಣೆ, ದೌರ್ಜನ್ಯ, ಅತ್ಯಾಚಾರಗಳಲ್ಲಿ ಕೌಟುಂಬಿಕ ಹಿಂಸೆಯು ಅತ್ಯಂತ ಭೀಕರವಾದಂತಹ ಪರಿಣಾಮ ಬೀರುವ ಅಂಶವಾಗಿದೆ. ಮುಂದುವರಿದ ಅಥವಾ ಜಾಗತೀಕರಣದ ಸಂದರ್ಭದಲ್ಲಿ ತಳ ಸಮುದಾಯದ ಮಹಿಳೆಯರು ಇಂತಹ ಸಮಸ್ಯೆಗಳನ್ನು ಎದಿರುಸುವುದನ್ನು ನಾವು ದಿನನಿತ್ಯ ನೋಡುತ್ತಿದ್ದೇವೆ. "ತಳ ಸಮುದಾಯದಲ್ಲಿನ ಮಹಿಳೆಯರು ಹೆಚ್ಚಾಗಿ ಕುಟುಂದಲ್ಲಿ ಜೇಡರ ಬಲೆಯಂತೆ ಸಿಲುಕಿ ಬಳಲುತ್ತಿರುವುದರ ಜೊತೆಗೆ ಅವರು ಸಾಮಾಜಿಕ ಸ್ಥಾನಮಾನದಿಂದ ತುಂಬಾನೆ ದೂರ ಉಳಿದವರಾಗಿದ್ದಾರೆ. ಕುಟುಂಬದಲ್ಲಿ ನಡೆಯುವ ಪ್ರತಿಯೊಂದು ಹಿಂಸೆ, ದೌರ್ಜನ್ಯಗಳು ಹೆಣ್ಣಿಗೆ ಸಹಜವಾದದು ಎನ್ನುವ ಸಂಗತಿಯನ್ನು ಗುರುತಿಸಿ ಕುಟುಂಬವನ್ನು ಹೆಣ್ಣಿಗೆ ಅನಿವಾರ್ಯ ಸಂಗತಿಯನ್ನಾಗಿ ಮಾಡಿ ಪುರುಷ ಪ್ರಧಾನ ವ್ಯವಸ್ಥೆಯು ಕುಟುಂಬದಲ್ಲಿ ಮಹಿಳೆಯರನ್ನು ಬಂದಿಸಲ್ಪಟ್ಟಿದೆ. ಇವರಲ್ಲಿ ತಳಸಮುದಾಯದ ಮಹಿಳೆಯರಲ್ಲಿ ಹೆಚ್ಚು ಸಮಸ್ಯೆಗಳು.

ಸಾಮಾಜಿಕ, ಸಾಂಸ್ಕೃತಿಕವಾಗಿ ಕುಟುಂಬದಲ್ಲಿರುವ ಸದಸ್ಯರುಗಳ ವರ್ತನೆಯಿಂದಾಗಿ ಪಾತ್ರಗಳ, ಜವಾಬ್ದಾರಿಗಳು ನಿರ್ಧಾರಗುತ್ತವೆ. ಕುಟುಂಬದಲ್ಲಿರುವ ಗಂಡಸರಿಂದ ತಳ ಸಮುದಾಯದ ಮಹಿಳೆಯರಲ್ಲಿ ಸಾಧಾರಣವಾದಂತಹ ವಿಷಯವಾಗಿದೆ. ಇದನ್ನು ಸಕ್ರಮವೆಂದೂ ಹೇಳಿಕೊಳ್ಳಲಾಗಿದೆ.

ಮಹಿಳೆಯರಲ್ಲಿ ನನ್ನ ಗಂಡ ತಾನೆ ಹಿಂಸಿಸುವುದು ಬೇರೆಯವರಲ್ಲಾ ತಾನೇ ಎಂಬ ಮನೋಭಾವ ಈಗಲೂ ಜೀವಂತವಾಗಿದೆ. ಗಂಡನಿಗೆ ಹಕ್ಕಿದೆ ಎಂದು ಹೇಳುತ್ತಾ ಗಂಡನನ್ನು ಬಿಟ್ಟುಕೊಡದೇ ತಲೆಬಾಗಿ ನಡೆಯುತ್ತಿದ್ದಾಳೆ. ಮನೆಗೆ ಬೇರೆ ಗಂಡಸರು ಬಂದಾಗ ಮನೆಯ ಗಂಡಸರು ಮಾತ್ರ ವ್ಯವಹರಿಸಬಹುದು. ಆದರೆ ಹೆಣ್ಣು ಮಾತನಾಡೋ ಹಾಗಿಲ್ಲ. ಸಾಮಾನ್ಯವಾಗಿ ಈ ಸಮುದಾಯದ ಹೆಂಗಸರು ಹೊರಗಡೆ ತಿರುಗಾಡುವುದಕ್ಕೂ ಆಸ್ಪದ ಇಲ್ಲದಂತೆ ಆಗಿದೆ. ಇದನ್ನು ಗೌರವಪೂರ್ವಕವಾಗಿ ಈ ಸಮುದಾಯ ಒಪ್ಪಿಕೊಂಡಿದೆ. ಹೆಣ್ಣಿನ ಬುದ್ದಿ ಮೊಣಕಾಲಿನ

ಕೆಳಗೆ ಎಂಬ ಮಾತು ಈ ಸಮುದಾಯಕ್ಕೆ ಅಂಟಿಕೊಂಡಿದೆ. ಹಾಗಾಗಿ ಮಹಿಳೆಯರಲ್ಲಿ ಸಾಮಾಜಿಕವಾಗಿ ಬೆಳೆಯುವುದಕ್ಕೆ ಪುರುಷ ಸಮಾಜ ಒಪ್ಪುವುದಿಲ್ಲ.

ಮದುವೆ ಎನ್ನುವ ಸಂಸ್ಥೆಯಿಂದ ಹಿಡಿದು ತವರು ಮನೆಗೆ ವಿದಾಯ ಹೇಳಿದ ನಂತರ ಗಂಡನ ಮನೆಯನ್ನು ಸೇರಿದ ಸ್ತ್ರೀ ಕೌಟುಂಬಿಕ ಹಿಂಸೆಯೂ ಇನ್ನೊಂದು ಮುಖವನ್ನು ಕಾಣುತ್ತಾ ಹೋಗುತ್ತದೆ. ವಿವಾಹದ ಬೇರೆ ಬೇರೆ ಮುಖಗಳಾದ, ಬಾಲ್ಯವಿವಾಹ, ಬಹುಪತ್ನಿತ್ವ, ವೈರುಧ್ಯ ಸ್ಥಿತಿಗತಿಗಳೆಲ್ಲವೂ ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯಗಳೇ ಆಗಿವೆ. ಚಿಕ್ಕ ವಯಸ್ಸಿನಲ್ಲಿಯೇ ಮದುವೆ ಮಾಡುವುದರಿಂದ ವರ್ಷ ಬರವಾಗಲೇ ಹೆಣ್ಣುಮಕ್ಕಳು ಗರ್ಭಧರಿಸಿ ತಾಯಿಯಾಗಿ ಹಲವಾರು ಸಮಸ್ಯೆಗಳನ್ನು ಎದುರಿಸುತ್ತ ಹೋಗುತ್ತಾಳೆ. ಇದರಿಂದ ಇವರಲ್ಲಿ ಬೇಗನೇ ಅನಾರೋಗ್ಯಕ್ಕೆ ತುತ್ತಾಗುವುದು ಕಂಡುಬರುತ್ತದೆ”.[೩]

**ದುಡಿಯುವ ಮಹಿಳೆಯರ ಸಮಸ್ಯೆಗಳು**

- ಕೌಟುಂಬಿಕ ಜವಾಬ್ದಾರಿ
- ಆರ್ಥಿಕ ಸ್ವಾತಂತ್ರ್ಯವಿಲ್ಲದಿರುವುದು
- ದುಡಿಮೆಯ ಅವಧಿ ಹೆಚ್ಚು
- ದುಡಿಯುವ ಹೆಣ್ಣುಮಕ್ಕಳ ಶಿಕ್ಷಣದಿಂದ ವಂಚಿತರಾಗುವುದು
- ಕೌಟುಂಬಿಕ ವಿಚ್ಛೇದನ ಸಮಸ್ಯೆ
- ಉಳಿತಾಯದ ಸಮಸ್ಯೆ
- ಶಿಶುಪಾಲನಾ ಸಮಸ್ಯೆ
- ವೇತನ ತಾರತಮ್ಯದ ಸಮಸ್ಯೆ
- ಶೌಚಾಲಯಗಳ ಕೊರತೆ

**ಬೇಡ ಮಹಿಳೆಯರಲ್ಲಿ ತಾಯ್ತನದ ಸಮಸ್ಯೆಗಳು**

“ಒಬ್ಬ ಮಹಿಳೆ ತಾಯಿಯಾಗಿದ್ದಾಳೆ ಎಂದು ತಿಳಿದಾಕ್ಷಣವೇ ಸಮುದಾಯದ ಕುಟುಂಬದಲ್ಲಿ ಆ ಹೆಣ್ಣಿನ ಪಾಲಿಗೆ ಒಂದು ರೀತಿಯ ಭಯದ ವಾತಾವರಣ ನಿರ್ಮಾಣವಾಗುತ್ತದೆ. ಕುಟುಂಬದ ಇತರ ಸದಸ್ಯರು ಆಕೆ ಗಂಡು ಮಗುವಿಗೆ ಜನ್ಮ ನೀಡಬೇಕೆಂದು ಒತ್ತಡವನ್ನು ಹಾಕುತ್ತಾರೆ. ಒಂದು ವೇಳೆ ಆಕೆ ಹೆಣ್ಣುಮಗುವನ್ನು ಹೆತ್ತರೆ, ಗಂಡು ಮಗು ಜನಿಸುವವರೆಗೂ ಅವಳು ಮಕ್ಕಳನ್ನು ಹೆರುವ ಯಂತ್ರವಾಗುತ್ತಾಳೆ. ಒಂದು ವೇಳೆ ಗಂಡು ಮಗು ಜನಿಸದೇ ಹೋದ ಸಂದರ್ಭದಲ್ಲಿ ಇನ್ನೊಂದು ಮದುವೆಯನ್ನು ಮಾಡಿಕೊಳ್ಳಲು ಪುರುಷ ತಯಾರಾಗಿರುವುದು ಕಂಡುಬರುತ್ತದೆ”.[೪]

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಬೇಡ ಮಹಿಳೆಯರು ಸಮಸ್ಯೆಗಳನ್ನು ಅನುಭವಿಸುತ್ತಿರುವುದನ್ನು ಗುರುತಿಸಿಕೊಳ್ಳಲಾಗಿದೆ. ಆಧುನಿಕ ಸಂದರ್ಭದಲ್ಲಿ ಕೂಡ ಹಲವಾರು ಸಮಸ್ಯೆಗಳ ಜಾಲದಿಂದ ಹೊರಬಾರದೆ ಹೊಲ, ಗದ್ದೆ, ಮಕ್ಕಳು, ಗಂಡ, ಸಂಬಂಧಿಕರು ಇದೇ ನಮ್ಮ ಜಗತ್ತು ಎಂದು ತಿಳಿದು ಇವರು ಶ್ರೇಯಾಭಿವೃದ್ಧಿಯೇ ನಮ್ಮ ಕೆಲಸ ಎಂಬ ಮಟ್ಟಿಗೆ ಜೀವನ ಸಾಗಿಸುತ್ತಿರುವುದು ಕಂಡುಬಂದಿದೆ. ಕೆಲ ಬೇಡ ಮಹಿಳೆಯರು ಇಂದಿಗೂ ಪಕ್ಕದ ಊರುಗಳನ್ನು ಕಾಣದಂತಹ ಸ್ಥಿತಿ ಎದುರಾಗಿದೆ. ಅಂದರೆ ಜೀವನಮಟ್ಟ ಯಾವ ಹಂತದಲ್ಲಿದೆ ಎಂಬುದನ್ನು ನಾವು ಗಮನಿಸಬಹುದಾಗಿದೆ.

**ಕೌಟುಂಬಿಕ ಜವಾಬ್ದಾರಿ**

ಕೇವಲ ಒಂದು ಊರಿನಲ್ಲಿ ಬೆಡ ಮಹಿಳೆಯರು ಇಷ್ಟೊಂದು ಪ್ರಮಾಣದಲ್ಲಿ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆಂದರೆ, ಇನ್ನು ತಾಲೂಕು, ಜಿಲ್ಲೆ, ರಾಜ್ಯದಲ್ಲಿ ಯಾವ ಪ್ರಮಾಣದಲ್ಲಿ ಇವರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆಂದು ಊಹಿಸಿಕೊಳ್ಳಲು ಕಷ್ಟವಾಗುತ್ತದೆ. ಕಮಲಾಪುರದ ಬೇಡ ಸಮುದಾಯದಲ್ಲಿ ಅವಿಭಕ್ತ ಕುಟುಂಬಗಳು ಹೆಚ್ಚಾಗಿ ಕಂಡುಬರುತ್ತವೆ. ಇಲ್ಲಿ ಯಜಮಾನನೇ ಮನೆಯನ್ನು ನೋಡಿಕೊಳ್ಳುವಂತಹ ಸ್ಥಿತಿ ಇದೆ. ಈ ಸಮುದಾಯದಲ್ಲಿ ಪುರುಷನೇ ಮುಖ್ಯವಾಗಿರುವುದರಿಂದ ಸ್ತ್ರೀ ನೆಲೆ ಕಾಣೆಯಾಗುತ್ತಿವೆ. ಉಳಿದಂತೆ ಸೂರ್ಯ ಹುಟ್ಟಿದಾಗಿನಿಂದ ಮುಳುಗುವವರೆಗೂ ಎಲ್ಲಾ ಕೆಲಸಗಳನ್ನು ಮಹಿಳೆಯರೇ ಮಾಡುತ್ತಿರುವುದು ಶೋಚನೀಯ ಸಂಗತಿಯಾಗಿದೆ. ಆದರೆ ಪುರುಷ ಸಮಾಜ ಕೇವಲ ಒಂದು ಕೆಲಸವನ್ನು ಮಾಡಿ ನಂತರ ವಿಶ್ರಾಂತಿ ಪಡೆಯುವ ಸ್ಥಿತಿ ನಿರ್ಮಾಣವಾಗಿದೆ. ಇಡೀ ಸಂಸಾರದ ಸಾಕೆ ಚಲಿಸುವವಳು ಮಹಿಳೆಗಿದ್ದರೂ ಅವಳಿಗೆ ಅವಳ ಸ್ಥಾನ ಮಾತ್ರ ಮರೀಚಿಕೆಕೊಂಡಿದೆ.

**ಆರ್ಥಿಕ ಸ್ವಾತಂತ್ರ್ಯವಿಲ್ಲದಿರುವುದು**

ಇದು ಕಮಲಾಪುರದ ಬೇಡ ಮಹಿಳೆಯರಲ್ಲಿ ಕಂಡುಬರುವ ಅತಿ ಮುಖ್ಯವಾದ ಸಮಸ್ಯೆ ಎಂದು ಹೇಳಬಹುದು. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಅವರನ್ನು ಸಂದರ್ಶಿಸಿದಾಗ ಮಹಿಳೆಯರು ವಾರಪೂರ್ತಿ ದುಡಿದಂತಹ ಹಣವನ್ನು ಪುರುಷನ ಕೈಗೆ ಕೊಡಲೇಬೇಕಾದಂತ ಸ್ಥಿತಿ ಪುರುಷರು ನಿರ್ಮಿಸಿದ್ದಾರೆ. ಇದಲ್ಲದೆ ತಮ್ಮ ಹೊಲ, ಗದ್ದೆಗಳಲ್ಲಿ ಬೆಳೆದ ಫಲದಿಂದ ಬಂದ ಆದಾಯವು ಸಹ ಮಹಿಳೆಯರಿಗೆ ತಿಳಿಸುವಂತಹ ಮಾನವೀಯ ಗುಣ ಇಲ್ಲದಾಗಿದೆ. ಇಲ್ಲಿ ಮಹಿಳೆಯರದು ಕೇವಲ ದುಡಿಯುವುದೇ ಮುಖ್ಯ ಕೆಲಸವಾಗಿದೆ. ಈ ಮಹಿಳೆಯರನ್ನು ಎತ್ತುಗಳಿಗೆ ಹೋಲಿಕೆ ಮಾಡಿದರೆ ತಪ್ಪಾಗಲಾರದು. ಮಹಿಳೆಯರು ಆರ್ಥಿಕ ವಿಷಯವನ್ನು ಪ್ರಸ್ತಾಪಿಸಿ ಪುರುಷನನ್ನು ನಿಂದಿಸುವಾಗಿಲ್ಲ.

**ದುಡಿಮೆಯ ಅವಧಿ ಹೆಚ್ಚು**

ಇಲ್ಲಿಯ ಮಹಿಳೆಯರು ಪುರುಷನಿಗಿಂತ ಹೆಚ್ಚು ದುಡಿಯುದು ಕಂಡುಬರುತ್ತದೆ. ವರ್ಷಪೂರ್ತಿ ನಿರಂತರವಾಗಿ ಕೆಲಸ ದೊರೆಯುವುದರಿಂದ ಮಹಿಳೆಯರಿಗೆ ವಿಶ್ರಾಂತಿ ಕನಸಿನ ಮಾತಾಗಿದೆ. ಕಾರ್ಲ್‌ಮಾರ್ಕ್ಸ್‌ರ ಸಿದ್ಧಾಂತದಂತೆ ಬಂಡವಾಳದಾರರಿಗೂ, ಕಾರ್ಮಿಕ ವರ್ಗಕ್ಕೂ ಕೆಲಸದ ಅವಧಿ ಹೆಚ್ಚಾದರೂ ಬಂಡವಾಳದಾರರು ಕಡಿಮೆ ಕೂಲಿಯನ್ನು ನೀಡುವಂತೆ ಇಲ್ಲಿನ ಕಮಲಾಪುರದ ಬೇಡ ಮಹಿಳೆಯರ ಸ್ಥಿತಿ ಹಾಗೆಯೇ ಆಗಿದೆ. ಅಂದರೆ ಇಲ್ಲಿ ಹೆಚ್ಚು ಕೆಲಸ ಮಾಡಿದರೂ ಅವರ ಕೂಲಿಯ ಮುಖವನ್ನು ನೋಡಿದ್ದಾಗಿದೆ. ಒಂದು ವೇಳೆ ನೋಡಿದರು ಅದು ಕೇವಲ ಕೆಲವು ನಿಮಿಷಗಳ ಕಾಲ ಮಾತ್ರ ಮಹಿಳೆಯರಲ್ಲಿರುತ್ತೆ, ನಂತರ ಪುರುಷನ ಪಾಲಾಗುತ್ತದೆ. ಜೊತೆಗೆ ಇಲ್ಲಿನ ಜನ ಹಲವು ಭಾಷಿಕರು, ಸಿನಿರಸಿಕರು, ಜೂಜುಕೋರರಾಗಿರುವುದರಿಂದ ಹಣವನ್ನು ಹೆಚ್ಚು ಪೋಲು ಮಾಡುತ್ತಾರೆ. ಇದರಿಂದ ಹೆಣ್ಣು ಮಕ್ಕಳ ಸಮಸ್ಯೆಗಳು ದಿನದಿಂದ ದಿನಕ್ಕೆ ಹೆಚ್ಚುತ್ತಲೇ ಇದೆ ಹೊರತು, ಪರಿಹಾರವಂತೂ ಕಾಣದ್ದಾಗಿದೆ.

**ಶಿಕ್ಷಣದಿಂದ ವಂಚಿತರಾಗುವುದು**

ಶಿಕ್ಷಣವನ್ನು ಪಡೆಯುವ ವಯಸ್ಸಿನಲ್ಲಿ ಹೆಣ್ಣುಮಕ್ಕಳ ಕೂಲಿಕೆಲಸಕ್ಕೆ ಹೋಗುವುದು ಕಂಡುಬರುತ್ತದೆ. ಇದಲ್ಲದೆ ಬಂದಂತಹ ಹಣವನ್ನು ಪುರುಷನ ಕೈಗೆ ನೀಡುವುದು ಹೆಣ್ಣು ಮಕ್ಕಳಿಗೆ ಶಿಕ್ಷಣ ಏಕೆಬೇಕು, ಬೇರೆಯವರ ಮನೆಗೆ ಮದುವೆ ಮಾಡಿಕೊಂಡು ಹೋಗುತ್ತಾಳೆ. ಅವಳು ಓದಿ ಏನು ಮಾಡುತ್ತಾಳೆ ಎಂದು ಇಲ್ಲಿಯ ಪುರುಷರು ಆಕೆಯನ್ನು ಶಿಕ್ಷಣದಿಂದ ವಂಚಿತಳನ್ನಾಗಿ ಮಾಡುತ್ತಿದ್ದಾರೆ. ಮನೆಗೆಲಸ, ಮುಸುರೆ ತಿಕ್ಕುವುದು, ಬಟ್ಟೆ ತೊಳೆಯುವುದು, ಚಿಕ್ಕಮಕ್ಕಳನ್ನು ನೋಡಿಕೊಂಡು ಕೂಲಿ ಕೆಲಸ ಮಾಡುವುದನ್ನು ಕಲಿತರೆ ಸಾಕು ಎಂಬ ಮನೋಭಾವ ಇವರಲ್ಲಿ ಮನೆಮಾಡಿದೆ

**ಆರೋಗ್ಯ ಸಮಸ್ಯೆ**

ಕಮಲಾಪುರದ ಬೇಡ ಮಹಿಳೆಯರಲ್ಲಿ ಆರೋಗ್ಯ ಸಮಸ್ಯೆ ಹೆಚ್ಚಾಗಿದೆ. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಅವರು ಮಾಡುತ್ತಿದ್ದ ವೃತ್ತಿಯಲ್ಲಿ ಹಲವಾರು ಚಟಗಳಿಗೆ ಬಲಿಯಾಗಿದ್ದಾರೆ. ಪಾನ್‌ಪರಾಕ್, ಗುಟ್ಕಾ, ನಸುಪುಡಿ, ಎಲೆ, ಅಡಿಕೆ ಹಾಕಿಕೊಳ್ಳುತ್ತಾ ಬಿರು ಬಿಸಿಲಿನಲ್ಲಿ ಕೆಲಸ ಮಾಡುತ್ತಾ ಇರುವುದು ಕಂಡುಬರುತ್ತದೆ. ಇದರಿಂದಾಗಿ ಅವರು ಹಲವಾರು ರೋಗಗಳಿಗೆ ಬಲಿಯಾಗಿದ್ದಾರೆ. ಇದಲ್ಲದೆ ಕೆಲವು ಮಹಿಳೆಯರು ಸಾಯಂಕಾಲ ದುಡಿದು ಬಂದ ಮಹಿಳೆಯರು(ಗಂಡನನ್ನು ಕಳೆದುಕೊಂಡ ಮಹಿಳೆಯರು). ಮಧ್ಯಪಾನವನ್ನು ಮಾಡುವುದು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದೆ. ಇದಕ್ಕೆಲ್ಲಾ ಕಾರಣ ಅವರಿಗೆ ಸರಿಯಾದ ರೀತಿಯಲ್ಲಿ ಶಿಕ್ಷಣ

ಇಲ್ಲದಿರುವುದು ಸಮಾಜದಲ್ಲಿ ಆಗುವ ಬದಲಾವಣೆಗಳ ಬಗ್ಗೆ ಅರಿವು ಇಲ್ಲದಿರುವುದು ಎಂಬ ಅಂಶವನ್ನು ಕಾಣಬಹುದಾಗಿದೆ.

ಸಮಾಜದಲ್ಲಿ ಮಹಿಳೆಯರ ಸ್ಥಾನಮಾನವನ್ನು ಸುಧಾರಿಸುವುದಕ್ಕಾಗಿ ಮತ್ತು ರಕ್ಷಿಸುವುದಕ್ಕಾಗಿ ಹೊರತಾದ ಅಧಿನಿಯಮಗಳು ಆದರೂ ಈ ಯಾವುದೇ ಕಾನೂನು, ನಿಯಮಗಳು ಅಂಥ ಪದ್ಧತಿಗಳಿಂದ ಮಹಿಳೆ ಒಳಗಾಗುತ್ತ ಶೋಷಣೆಗಳನ್ನು ಸಂಪೂರ್ಣವಾಗಿ ನಿವಾರಿಸಲು ಪ್ರಯತ್ನಿಸಿದರೂ ಅವು ವಿಫುಲವಾಗುತ್ತವೆ. ಮಹಿಳೆಯರಿಗೆ ಸಂವಿಧಾನದಲ್ಲಿ ಹಲವಾರು ಅವಕಾಶ ನೀಡಿದರೂ ಇನ್ನೂ ಸಹ ಕೌಟುಂಬಿಕ ವ್ಯವಸ್ಥೆಯಿಂದ ಹೊರಬರಲು ಆಗುತ್ತಿಲ್ಲ. ಕೆಲವೊಂದು ಮಹಿಳೆಯರು ಹೊರಜಗತ್ತಿಗೆ ಬಂದರೂ ಅಲ್ಲಿನ ಕೆಲವು ಮಹಿಳೆಯರು ಬೇರೆ ಬೇರೆ ಕ್ಷೇತ್ರದಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದರೂ ತಳಸಮುದಾಯದ ಮಹಿಳೆಯರು ಇನ್ನೂ ಮನೆಯಿಂದ ಹೊರ ಪ್ರಪಂಚಕ್ಕೆ ಬರಲು ಹೆದುರುವ ಸ್ಥಿತಿ ನಿರ್ಮಾಣವಾಗಿದೆ.

**ಶೌಚಾಲಯಗಳ ಕೊರತೆ**

ಕಮಲಾಪುರದ ಪ್ರತಿ ಕೇರಿಗಳಲ್ಲಿ ಮಹಿಳೆಯರ ಮನೆಗಳಲ್ಲಿ ಶೌಚಾಲಯ ಕೊರತೆ ಕಂಡುಬರುತ್ತದೆ. ಕ್ಷೇತ್ರಕಾರ್ಯದಲ್ಲಿ ಅದನ್ನು ಪರಿಶೀಲಿಸಿದಾಗ ಮನೆಯಲ್ಲಿ ಜಾಗದ ಕೊರತೆ, ಅಕ್ಕ-ಪಕ್ಕಮನೆಗಳಿಂದ ಚರಂಡಿ ನೀರು ಇನ್ನು ಶೌಚಾಲಯ ಕೊರತೆಯಿಂದಾಗಿ ಪ್ರತಿ ಕೇರಿಯಲ್ಲಿ ಶೌಚಾಲಯ ಕೊರಡಿ ಇದ್ದು ಅದು ಆ ಕೇರಿಯ ಸಾರ್ವಜನಿಕ ಮಹಿಳೆಯರು ಹೋಗಲು ಅನುಕೂಲವಿದ್ದರೂ ಸುಮಾರು ಒಂದು ಕೇರಿಯಿಂದ ೬೦ ರಿಂದ ೧೦೦ ಮಹಿಳೆಯರು ದಿನಾಲೂ ಬೆಳಗಿನ ಸಮಯದಲ್ಲಿ ಅಲ್ಲಿಯೇ ನಿತ್ಯ ಕಾರ್ಯ ಮಾಡುತ್ತಾರೆ. ಅಲ್ಲಿ ನೀರಿನ ಸೌಲಭ್ಯ ಇಲ್ಲದ ಕಾರಣ ಪ್ರತಿ ಮನೆಯ ಮಹಿಳೆಯರೂ ತಂಬಿಗೆಯಲ್ಲಿ ನೀರನ್ನು ತೆಗೆದುಕೊಂಡು ಹೋಗುವುದು ಕಂಡುಬರುತ್ತದೆ. ಇದರಿಂದ ಆ ಪ್ರದೇಶದಲ್ಲಿ ವಾಸ ಮಾಡುವ ಜನ ಮತ್ತು ಅಲ್ಲಿಗೆ ಹೋಗುವ ಮಹಿಳೆಯರು ಹಲವಾರು ಕಾಯಿಲೆಗೆ ತುತ್ತಾಗುತ್ತಿದ್ದಾರೆ.

ಈ ಎಲ್ಲಾ ಸಮಸ್ಯೆಗಳನ್ನು ಆಧರಿಸಿ ಮಹಿಳೆಯರ ಸಮಸ್ಯೆಗಳಿಗೆ ಮುಕ್ತಾಯ ಹಾಡಲು ಹಲವಾರು ಕಾರ್ಯಕ್ರಮಗಳನ್ನು ಜಾರಿಗೆ ತಂದರೂ ಸಹ ಮಹಿಳೆಯರಲ್ಲಿ ಪುರುಷರು ಎಳೆದ ಜೇಡರ ಬಲೆಯಿಂದ ಹೊರಬರುವುದು ಇನ್ನು ಎಷ್ಟು ಶತಮಾನಗಳ ಬೇಕಾಗುತ್ತದೆ? ಇವುಗಳನ್ನು ಹೊರತುಪಡಿಸಿದರೂ ಮಹಿಳೆಯರು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅದರಲ್ಲಿ ಪುರುಷರು ನೀಡುವ ಲೈಂಗಿಕ ಕಿರುಕುಳ, ದೈಹಿಕ ಹಿಂಸೆ, ಕಛೇರಿಗಳಲ್ಲಿ ಮಾನಸಿಕ ಹಿಂಸೆ ಹೀಗೆ ಹಲವಾರು ಸಮಸ್ಯೆಗಳಿಗೆ ಇವರು ಗುರಿಯಾಗುತ್ತಿದ್ದಾರೆ.

**ಜನಸಂಖ್ಯೆ(೧೯೯೧ರ ಜನಗಣತಿಯ ಪ್ರಕಾರ)**

೧. ಪ್ರತಿ ೧೦೦೦ ಪುರುಷರಿಗೆ ಕೇವಲ ೯೨೭ ಮಹಿಳೆಯರಿದ್ದಾರೆ

೨. ದೈಹಿಕವಾಗಿ ಹುಟ್ಟಿದಾಗ ಹೆಣ್ಣುಮಕ್ಕಳಿಗಿಂತ ಗಂಡುಮಕ್ಕಳು ಆರೋಗ್ಯವಂತರಾಗಿರುತ್ತಾರೆ.

೩. ಶಿಕ್ಷಣದ ಪ್ರಮಾಣ ಗಂಡು ಮಕ್ಕಳಿಗಿಂತ ಕಡಿಮೆ

೪. ಮಧ್ಯದಲ್ಲಿ ಶಾಲೆ ಬಿಡುವುದು ಅಧಿಕ

೫. ಉದ್ಯೋಗದಲ್ಲಿ ಕಡಿಮೆ ಪ್ರಮಾಣದಲ್ಲಿ ಕಾಣಿಸಿಕೊಳ್ಳುತ್ತಾರೆ.

೬. ಸಂಸತ್ತಿನಲ್ಲಿ ಶೇ.೮%ರಷ್ಟು ಸ್ಥಾನಗಳಲ್ಲಿ ಮಾತ್ರ ಮಹಿಳೆಯರಿದ್ದಾರೆ.

೭. ಆಡಳಿತಗಾರರು/ವ್ಯವಸ್ಥಾಪಕರ ಪೈಕಿ ಕೇವಲ ಶೇ.೨.೩%ರಷ್ಟು ಮಾತ್ರ ಮಹಿಳೆಯರು

೮. ವೃತ್ತಿಪರ ಮತ್ತು ತಾಂತ್ರಿಕ ಉದ್ಯೋಗದಲ್ಲಿರುವವರು ಪೈಕಿ ಕೇವಲ ಶೇ.೨೦.೫ರಷ್ಟು ಮಾತ್ರ ಮಹಿಳೆಯರು

೯. ೧೫–೨೪ ವರ್ಷದ ಹೆಣ್ಣುಮಕ್ಕಳು ಹೆರಿಗೆ ಮತ್ತು ಗರ್ಭಧಾರಣೆಯಿಂದ ಸಾಯುವವರ ಸಂಖ್ಯೆ ಶೇ.೪೬%ರಷ್ಟು.[9]

ಇದರಲ್ಲಿ ಈಗ ಸ್ವಲ್ಪ ಬದಲಾವಣೆ ಆಗಿದೆಯೇ ಆದರೂ ತಳ ಸಮುದಾಯದ ಮಹಿಳೆಯರುಗಳಲ್ಲಿ ಈ ಮೇಲಿನ ಅಂಶಗಳಲ್ಲಿ ಯಾವುದೇ ಬದಲಾವಣೆಯಾಗಿಲ್ಲ ಎಂಬುದನ್ನು ಕಾಣಬಹುದಾಗಿದೆ.

**ಮಹಿಳೆಗೆ ಸಂಬಂಧಪಟ್ಟ ಕೆಲವೊಂದು ಕಾನೂನುಗಳು**

೧. "೧೮೨೬ರ ಸತಿಪದ್ಧತಿ ಸಹಗಮನ

೨. ೧೮೫೬ರಲ್ಲಿ ಹಿಂದೂ ವಿಧವಾ ಪುನರ್ವವಿವಾಹ ಕಾಯಿದೆ.

೩. ೧೮೭೦ರಲ್ಲಿ ಹೆಣ್ಣು ಶಿಶು ಹತ್ಯಾ ನಿರ್ವಾಣ ಅಧಿನಿಯಮ

೪. ೧೯೨೯ರಲ್ಲಿ ಬಾಲ್ಯ ವಿವಾಹ ನಿರ್ಬಂಧಿತ ಕಾಯಿದೆ

೫. ೧೯೬೧ರಲ್ಲಿ ವರದಕ್ಷಿಣೆ ನಿಷೇಧ ಕಾಯಿದೆ

೬. ೨೦೦೬ರಲ್ಲಿ ಕೌಟುಂಬಿಕ ದೌರ್ಜನ್ಯದ ವಿರುದ್ಧ ರಕ್ಷಣಾ ಕಾಯಿದೆ

೭. ರಾಷ್ಟ್ರೀಯ ಮಹಿಳಾ ಆಯೋಗ ಅಧಿನಿಯಮ–೧೯೯೦

೮. ಮಹಿಳೆಯ ಅಸಭ್ಯ ಪ್ರದರ್ಶನ ನಿಷೇಧ ಅಧಿನಿಯಮ ೧೯೮೬

೯. ವಿಶೇಷ ವಿವಾಹ ಕಾಯಿದೆ–೧೯೪೫

೧೦. ಹಿಂದು ವಿವಾಹ ಕಾಯಿದೆ–೧೯೫೫

೧೧. ವಿದೇಶಿ ವಿವಾಹ ಕಾಯಿದೆ–೧೯೬೯

೧೨. ಭಾರತೀಯ ವಿಚ್ಛೇದನ ಕಾಯಿದೆ–೧೯೬೯

೧೩. ಭಾರತೀಯ ವಂಶಪಾರಂಪರಿಕ ಹಕ್ಕು–೧೯೨೫

೧೪. ಬಾಲ್ಯ ವಿವಾಹ ತಡೆ ಕಾಯಿದೆ–೧೯೨೯

೧೫. ಕೌಟುಂಬಿಕ ನ್ಯಾಯಾಲಯಗಳ ಕಾಯಿದೆ–೧೯೮೪

೧೬. ಲೈಂಗಿಕ ದೌರ್ಜನ್ಯ ವಿರುದ್ಧ ಮಹಿಳಾ ರಕ್ಷಣಾ ಮಸೂದೆ–೨೦೦೫

೧೭. ರಾಷ್ಟ್ರೀಯ ಮಹಿಳಾ ಆಯೋಗದ ಕಾಯಿದೆ–೧೯೯೦

೧೮. ರಾಜ್ಯ ಮಹಿಳಾ ಆಯೋಗದ ಕಾಯಿದೆ–೧೯೯೫

೧೯. ವೈದ್ಯಕೀಯ ಗರ್ಭ ಸಮಾಪನ ಕಾಯಿದೆ–೧೯೭೧

೨೦. ಕೌಟುಂಬಿಕ ನ್ಯಾಯಾಲಯ ಕಾಯಿದೆ–೧೯೮೪

೨೧. ಕೌಟುಂಬಿಕ ದೌರ್ಜನ್ಯದಿಂದ ಮಹಿಳಾ ರಕ್ಷಣಾ ಅಧಿನಿಯಮ–೨೦೦೫"[5]

**ಅಡಿಟಿಪ್ಪಣಿ**

೧. ಒಡೆಯರ್ ಡಿ. ಹೆಗಡೆ, ಚಂದ್ರಶೇಖರ್, ಮಹಿಳೆ ಮತ್ತು ಸಾಮಾಜಿಕ ಅಭಿವೃದ್ಧಿ, ಅರ್ಜುನ್ ಪಬ್ಲಿಷಿಂಗ್ ಹೌಸ್, ಮೈಸೂರು, ೨೦೦೮, ಪು.ಸಂ.೧೩೪

೨. ಅಭಿವೃದ್ಧಿ ಮಾಸ ಪತ್ರಿಕೆ; ಕೈಮಗ್ಗ ಮತ್ತು ಕರಕುಶಲ ವಲಯ, ಯೋಜನಾ ಮೇ, ೨೦೧೧

೩. ಶಿವಾನಂದಾಚಾರ್ ಬಡಿಗೇರ, ಕೌಟುಂಬಿಕ ಹಿಂಸೆ ಮತ್ತು ಮಹಿಳೆ, ಎಂ.ಫಿಲ್ ಅಪ್ರಕಟಿತ ಸಂಪ್ರಬಂಧ ಮಹಿಳಾ ಅಧ್ಯಯನ ವಿಭಾಗ, ಪುಟ.೧೮, ೨೦೧೧

೪. ಗೀತಾ ಕೃಷ್ಣಮೂರ್ತಿ, ಮಹಿಳಾ ಹಕ್ಕುಗಳು ಮಾನವ ಹಕ್ಕುಗಳ ನೆಲೆಯಲ್ಲಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯, ಪುಟ.೧೮೩ ಮತ್ತು ೧೮೮.

೫. ಶ್ರೀಮತಿ ಅನಿತಾ ಸಿ., **ಮಹಿಳೆ ಮತ್ತು ಹಕ್ಕುಗಳು**, ಎಂ.ಫಿಲ್, ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭–೦೮

* * *

ಅಧ್ಯಾಯ ೫

# ಸಮಾರೋಪ

ಮಹಿಳೆಯರಿಗೆ ಆತ್ಮವಿಶ್ವಾಸದಿಂದ ಬದುಕುವ ಮಾನವೀಯ ವಾತಾವರಣವನ್ನು ನಿರ್ಮಿಸುವ ಅಗತ್ಯವಿದೆ. ಇವರಿಗೆ ಇರುವ ಸ್ವಲ್ಪ ಭೂಮಿಯನ್ನು ಉಳಿಸಿಕೊಂಡು ಹೋಗುವಂತೆ ತಿಳಿಸಬೇಕಾದ ಅಂಶವಾಗಿದೆ. ಭೂಮಿ, ಹೊಲ, ಗದ್ದೆಗಳ ಅಭಿವೃದ್ಧಿಯ ಮೂಲ ಸಂಖ್ಯಾತಗಳಾಗಿವೆ. ಅಂದರೆ ಇತ್ತೀಚೆಗೆ ಅವರು ನಂಬಿ ಬಂದ ಬದುಕಿನ ಮೂಲಕವೇ ಅವರನ್ನು ಸದೃಢಗೊಳಿಸಬೇಕಾದ ಅಗತ್ಯವಿದೆ. ಕೃಷಿಗೆ ಸಂಬಂಧಪಟ್ಟಂತೆ ಪಂಚವಾರ್ಷಿಕ ಯೋಜನೆಗಳಲ್ಲಿ ಸರಕಾರ ಹಲವಾರು ಯೋಜನೆಗಳನ್ನು ಹಾಕಿಕೊಳ್ಳುತ್ತೇವೆ. ಅದರಲ್ಲಿ ಕೆಲವೊಂದು, ದಲಿತ ಮಹಿಳೆಯರಿಗೆ ಹಾಗೂ ಬೇಡ ಮಹಿಳೆಯರಿಗೆ ಹಲವಾರು ಸೌಲಭ್ಯ ಕಲ್ಪಿಸಿದರೂ ಅದು ಕಡಿಮೆ ಇರುವ ಸೌಲಭ್ಯಗಳನ್ನಾದರೂ ಬಳಸಿಕೊಳ್ಳುವ ಪರಿಯನ್ನು ಮಹಿಳೆಯರಿಗೆ ತಿಳಿಸುವುದು ಅಗತ್ಯವಾಗಿದೆ. ಸರಕಾರದ ಹಲವಾರು ಯೋಜನೆಗಳು ಇಂದು ಮಧ್ಯವರ್ತಿಗಳ ಪಾಲಾಗುತ್ತದೆ.

ನಮ್ಮ ದೇಶದಲ್ಲಿ ಮಹಿಳೆಯರನ್ನು ಕೇವಲ, ಮನೆಗೆಲಸದವರಿಗಾಗಿ ದುಡಿಯುವವರು, ಕೂಲಿಕಾರರು ಅಥವಾ ಭಿಕ್ಷಕರು ಮಕ್ಕಳನ್ನು ಪಾಲನೆ ಮಾಡುವವರು ಎಂದೂ ಪರಿಗಣಿಸಲಾಯಿತೇ ಹೊರತು ಅವರ ಕೆಲಸ ಆರ್ಥಿಕಾಭಿವೃದ್ಧಿಗೆ ನೆರವಾಗಲಿವೆ ಎಂಬ ದೃಷ್ಟಿಯಿಂದ ಇದುವರೆಗೆ ನೋಡಲಿಲ್ಲ ಆಧುನಿಕ ಪರಂಪರೆಯಲ್ಲಿ ಮಹಿಳೆ ಕೇವಲ ಒಂದು ಹೊರೆಯಾಗಿ ಪರಿಣಮಿಸಿದುದು ದುರಂತ ಇದಕ್ಕೆ ಉದಾಹರಣೆಯನ್ನು ಗಮನಿಸುವುದಾದರೆ ನಾನು ಅಧ್ಯಯನ ಮಾಡಿದ ಕೆಲವೊಂದು ಮನೆಯಲ್ಲಿ ಹೇಳಿದ ಮಾತು (ಆಟ ಬಿಡ್ಡ ಮಾಕು ತಲನೊಪ್ಪಿ ಅದೇ ಮಗಡು ಆಯಿತೇ ಮಾಕು ಚಚ್ಚೆಪೋಯಿನ ತನಕು ತೋಡಗ ಉಂಟಾಡು) ಎಂಬ ಭಾವನೆ ಅವರಲ್ಲಿ ಇದೆ ಇದನ್ನು ಕ್ಷೇತ್ರಕಾರ್ಯದಿಂದ ತಿಳಿಯಲಾಗಿದೆ.

**ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡ ಅಂಶಗಳು**

ಬೇಡ ಮಹಿಳೆಯರು ಹೆಚ್ಚಾಗಿ ಕಪ್ಪು ಮಿಶ್ರಿತ ಗೋಧಿ ಬಣ್ಣವನ್ನು ಹೊಂದಿದ್ದು ಇವರ ೭ ಕೇರಿಗಳಲ್ಲಿ ವಸತಿಗಳು ಪ್ರತ್ಯೇಕವಿಲ್ಲ. ಒಂದಕ್ಕೊಂದು ಪಕ್ಕದಲ್ಲಿ ಅಂಟಿಕೊಂಡಂತೆ ಇವೆ. ಇವರ ಮನೆಗಳು ಕೆಲವು ಸ್ವಂತ ಮನೆಗಳಿದ್ದ ಅಂಚಿನ ಮನೆಗಳು, ಆರ್.ಸಿ.ಸಿ. ಮನೆಗಳಿವೆ. ಇವರಲ್ಲಿ ಮುಖ್ಯವಾಗಿ ಕಂಡುಬರುವ ಸಮಸ್ಯೆಯೆಂದರೆ ಶಿಕ್ಷಣದ ಕೊರತೆ.

ಕಮಲಾಪುರದಲ್ಲಿ ಇಂದಿನವರೆಗೂ ಸಾಟಿ ಪದ್ಧತಿ ಇದೆ. ಅಂದರೆ ವಸ್ತು ವಿನಿಮಯ ಪದ್ಧತಿ ಇದೆ. ಮನೆಯಲ್ಲಿ ಏನಾದರೂ ವಸ್ತುಗಳು ಕಾರ, ಉಪ್ಪು, ಸಕ್ಕರೆ, ಕಾಳು ಇಲ್ಲದಿದ್ದರೆ ಪಕ್ಕದ ಮನೆಯಲ್ಲಿ ಹೋಗಿ ಅವರಿಗೆ ಬೇಕಾದ ವಸ್ತುವನ್ನು ತಂದು ಅದಕ್ಕೆ ಪ್ರತಿಕಾರವಾಗಿ ಬೇರೆ ವಸ್ತುವನ್ನು ನೀಡುವುದು ಇನ್ನು ಜೀವಂತವಾಗಿದೆ. ಆಹಾರ ಪದ್ಧತಿಯಲ್ಲಿ ಇವರು ಸಾಕಿದ ಪ್ರಾಣಿಗಳಿಗೆ ರೋಗ ಬಂದರೆ ಅದನ್ನು ತಿನ್ನುವ ಪದ್ಧತಿ ಇದೆ. ಕಾಡು ಇವರ ಮೂಲ ವೃತ್ತಿ ಬೇಟೆಯಾಗಿರುವುದರಿಂದ ಪ್ರಾಣಿಗಳನ್ನು ಆಹಾರಕ್ಕಾಗಿ ಭೇಟೆಯಾಡಿ ಆ ಮಾಂಸವನ್ನು ಸೇವಿಸುವರು.

ಶಿಕ್ಷಣಕ್ಕೆ ಸಂಬಂಧಿಸಿದಂತೆ ಹಿಂದೆ ಬ್ರಿಟಿಷ್ ಸರಕಾರವು ಪ್ರತಿ ಸಮುದಾಯಗಳಿಗೆ ಬಾಲಕ, ಬಾಲಕಿಯರ ಶಾಲೆಗಳನ್ನು ತೆರೆದಿತ್ತು. ಸ್ವಾತಂತ್ರ್ಯ ಬಂದ ನಂತರ ಆ ಶಾಲೆಗಳು ಸ್ಥಳಿಯ ಸರಕಾರದ ಹಿಡಿತಕ್ಕೆ ಬಂದವು. ದೊಡ್ಡ ತಪ್ಪಲಿನ ಪ್ರದೇಶದಲ್ಲಿ ಸುತ್ತಮುತ್ತಲು ನೀರಾವರಿಯ ಸೌಲಭ್ಯ ಹೊಂದಿದ್ದರೂ ಸಹ ಸ್ವಂತ ಕೃಷಿ ಭೂಮಿ ಕಡಿಮೆಯಿದೆ. ಜೊತೆಗೆ ಇವರ ಕೃಷಿ ಕೂಲಿಯ ಮೇಲೆ ಅವಲಂಬನೆಯಾಗಿರುವುದರಿಂದ ಬೇರೆಯವರ ಗದ್ದೆಗಳಲ್ಲಿ ಕೆಲಸಕ್ಕೆ ಹೋಗುತ್ತಾರೆ. ಅಧ್ಯಯನದ ಪ್ರಕಾರ ಬೇಡ ಸಮುದಾಯದ ಮಹಿಳೆಯರು ಕೃಷಿ ಭೂಮಿ ಕಡಿಮೆ ಇರುವ ಕಾರಣ ಇವರು ಆರ್ಥಿಕವಾಗಿ ಸಬಲರಾಗುತ್ತಿಲ್ಲ. ಒಂದು ವಾಸ್ತವ ಸಂಗತಿಯೆನೆಂದರೆ ಬೇಡ ಮಹಿಳೆಯರ ಆಧುನಿಕ ಗೃಹಪಯೋಗಿ ವಸ್ತುಗಳಾದ ರೇಡಿಯೋ, ಟಿ.ವಿ., ಟೇಪ್ ರೆಕಾರ್ಡರ್, ಪೋನ್, ಮೊಬೈಲ್ ಮುಂತಾದವುಗಳನ್ನು ಕೊಳ್ಳುವ ಆರ್ಥಿಕ ಶಕ್ತಿ ಪಡೆದಿದ್ದಾರೆಂದೂ ಅವರ ಜೀವನ ಮಟ್ಟ ಸುಧಾರಣೆಗಾಗಿ ಸಂತೋಷ ಮನರಂಜನೆ ಅನುಭವಿಸುತ್ತಿರುವರು. ಆದರೂ ಈಗಲೂ ಬೇಡ ಸಮುದಾಯದ ಜನರ ಗೃಹ ನಿರ್ಮಾಣ ತೃಪ್ತಿದಾಯಕವಾಗಿಲ್ಲ. ಬಹಳ ಮನೆಗಳು ಕೆಳಗುಣಮಟ್ಟದ್ದಾಗಿದೆ. ಸಾಧಾರಣ ಕಟ್ಟುವಿಕೆ ಕಂಡುಬಂದಿಲ್ಲ. ಅವರಿಗೆ ಬಡತನ, ಅಜ್ಞಾನ, ಸರಕಾರದ ಸಾಲ ಸೌಲಭ್ಯಗಳ ತಿಳುವಳಿಕೆ ಇಲ್ಲದಿರುವುದೇ ಈ ದುಸ್ಥಿತಿಗೆ ಕಾರಣ. ಬಹಳ ಮನೆಗಳಲ್ಲಿ ಸುಧಾರಿತ ಶೌಚಾಲಯಗಳು ಇಲ್ಲ. ಅವರು ಉತ್ತಮ ಸ್ನಾನಗೃಹ, ಸ್ವಚ್ಚ ಪರಿಸರದ ಅವಶ್ಯಕತೆಗಳನ್ನು ಇನ್ನು ಮನಗಂಡಿಲ್ಲ.

ಈ ಅಧ್ಯಯನದ ಮೂಲಕ ಗೊತ್ತಾಗುವ ಸ್ಪಷ್ಟ ಸಂಗತಿಯೆಂದರೆ ಭಾರತದ ಅತ್ಯಂತ ವಿಶಿಷ್ಟವಾದ ಸಮುದಾಯಗಳಲ್ಲಿ ಬೇಡ ಸಮುದಾಯವು ಒಂದು ಭೇಟೆಯಿಂದ ಪ್ರಾರಂಭವಾಗಿ ಹಲವಾರು ರೀತಿಯ ವಿಕಾಸನ ಹಂತಗಳನ್ನು ಕಂಡ ಸಮುದಾಯವಾಗಿದೆ. ಯಾವ ಸಮುದಾಯವು ಕೇವಲ ಅನಿಶ್ಚಿತ ಮತ್ತು ಅವಲಂಬಿತ ಆರ್ಥಿಕ ಮೂಲಗಳನ್ನು ನೆಚ್ಚಿಕೊಂಡಿರುತ್ತದೆಯೋ ಆ ಸಮುದಾಯ ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಯಾವತ್ತು ಹಿನ್ನಡೆಯನ್ನು ಅನುಭವಿಸುತ್ತಲೇ ಇರುತ್ತವೆ.

ಶೈಕ್ಷಣಿಕವಾಗಿ ಸಬಲಗೊಳ್ಳದ ಸಮುದಾಯವು ವರ್ತಮಾನವನ್ನು ಎದುರಿಸಿ ನಿಲ್ಲಲು ಸಾಧ್ಯವಿಲ್ಲ. ಕೇವಲ ಗ್ರಾಮಪಂಚಾಯಿತಿ, ತಾಲೂಕು ಪಂಚಾಯಿತಿ, ಮತ್ತು ಜಿಲ್ಲಾ ಪಂಚಾಯಿತಿಗಳಿಗೆ ಮಾತ್ರ ಇವರ ರಾಜಕೀಯ ಚಟುವಟಿಕೆ ಸೀಮಿತವಾಗಿದೆ. ಅದಾರಚೆಗೆ ರಾಜ್ಯ ಮತ್ತು ರಾಷ್ಟ್ರಮಟ್ಟದ ರಾಜಕಾರಣದಲ್ಲಿ ಮಹಿಳೆಯರು ಪಾಲ್ಗೊಂಡಿರುವುದು ತುಂಬಾ ಕಡಿಮೆ.

ಮುಖ್ಯವಾಗಿ ಬೇಡ ಸಮುದಾಯ ಸಮರ್ಪಕವಾಗಿ ರಾಜಕೀಯ ಪ್ರವೇಶ ಮಾಡಲು ಸಾಧ್ಯವಾಗದಿರುವುದಕ್ಕೆ ಹಲವು ಕಾರಣಗಳಿವೆ. ಬಡತನ, ಮೀಸಲಾತಿ ಕೊರತೆ, ಇನ್ನು ಮತದಾರರ ಪಟ್ಟಿಯಲ್ಲಿ ಸೇರಬೇಕಾದವರ ಸಂಖ್ಯೆ ಹೆಚ್ಚಾಗಿದ್ದು ಮತ್ತು ಸರಕಾರ ಹೆಣ್ಣು ಮಕ್ಕಳಿಗಾಗಿ ಮತ್ತು ಅವರಿಗೆ ಶಿಕ್ಷಣ ನೀಡಲು ಹಲವಾರು ಯೋಜನೆಗಳನ್ನು ರೂಪಿಸಿದ ಬಿಸಿಯೂಟ ಕಾರ್ಯಕ್ರಮ, ಸರಕಾರ ಕಡ್ಡಾಯ ಶಿಕ್ಷಣ, ಸರ್ವಶಿಕ್ಷಣ ಅಭಿಯಾನ ಮುಂತಾದ ಕಾರ್ಯಕ್ರಮಗಳನ್ನು ಹಾಕಿಕೊಂಡು ಶಾಲೆಗೆ ಮಕ್ಕಳನ್ನು ಹಾಜರಾಗುವಂತೆ ಹಾಗೂ ಪಾಲಕರಿಗೆ ನಾನಾ ಆಕರ್ಷಣೆಗಳನ್ನು ಜಾರಿಗೊಳಿಸುತ್ತಿದೆ. ಆದರೂ ಸಂಪೂರ್ಣವಾಗಿ ಇದನ್ನು ಸಾಧಿಸಲು ಆಗುತ್ತಿಲ್ಲ.

ಬೇಡ ಸಮುದಾಯವು ಮೊದಲು ಪಿತೃ ಪ್ರಧಾನ ಕುಟುಂಬಗಳಾಗಿದ್ದವು. ಮನೆಯ ಹಿರಿಯನೇ ಯಜಮಾನ ಇಂತಹ ಸುಸಂಘಟಿತ ಕುಟುಂಬಗಳು ಇಂದು ಮಾಯಾವಾಗುತ್ತಿವೆ. ಕ್ಷೇತ್ರ ಅಧ್ಯಯನ ಸಂದರ್ಭದಲ್ಲಿ ಕಂಡಬಂದ ವಿಷಯವೆಂದರೆ ಮನೆಯಲ್ಲಿ ಮದುವೆಯಾದ ಕೆಲವೇ ದಿನಗಳಲ್ಲಿ ಬೇರೆಯಾಗಿರುವ ಕುಟುಂಬಗಳೇ ಹೆಚ್ಚು, ಅದರ ಜೊತೆಗೆ ತಂದೆ-ತಾಯಿಗಳ ಹೆಸರಿನಲ್ಲಿದ್ದ ಪಡಿತರ ಚೀಟಿಯಲ್ಲಿ ಹೆಸರನ್ನು ಬೇರ್ಪಡಿಸಿ ತಮಗೆ ಸ್ವಂತ ಕುಟುಂಬದ ಹೆಸರನ್ನು ಸೂಚಿಸಲಾಗಿದೆ. ಈ ಸಮುದಾಯದಲ್ಲಿ ವಯಸ್ಸು ಮತ್ತು ಲಿಂಗಾನುಸಾರವಾಗಿ ಕೆಲಸ ಕಾರ್ಯ ಹಂಚಿಕೆಯಾಗಿದೆ. ಸಾಮಾನ್ಯವಾಗಿ ಪುರುಷರು ಹೊರಗಡೆ ಕೆಲಸವನ್ನು ಮಾಡುತ್ತಾರೆ. ಮಹಿಳೆಯರು ಹೊರಗಡೆ ಕೆಲಸ ಮತ್ತು ಗೃಹಕೆಲಸ ಎರಡನ್ನು ನಿಭಾಯಿಸುತ್ತಾರೆ. ಗಂಡುಮಕ್ಕಳು ಪಾಲಕರ ನೆರವಿಗಾಗಿ ಹೊಲ, ಗದ್ದೆಗಳಲ್ಲಿ ಬಾಳೆಗೊನೆ ಹೊರುವುದು. ಪಟ ಕಡೆಯುವುದು, ಗಿಡ ಪಾತ್ರೆ ಮಾಡುವುದು, ನೀರು ಹಾಯಿಸುವುದು, ಸೌದೆ ಒಡೆಯುವುದು ಮಾಡಿದರೆ ಮಹಿಳೆ

ಕಸಗುಡಿಸುವುದು, ಪಾತ್ರೆ ತೊಳೆಯುವುದು, ಅಡುಗೆ ಮಾಡುವುದು ಮಕ್ಕಳಿಗೆ ಶಾಲೆಗೆ ಕಳಿಸುವ ಕೆಲಸ ಮಹಿಳೆ ಮನೆಯಲ್ಲಿ ಮಾಡುತ್ತಾಳೆ. ಪರಿಶಿಷ್ಟ ಪಂಗಡ ಮಹಿಳೆಯರಿಗೆ ಕೇಂದ್ರ ಮತ್ತು ರಾಜ್ಯ ಸರಕಾರದಿಂದ ವಿಶೇಷ ಅನುದಾನಗಳ ಬಿಡುಗಡೆಯಾಗುತ್ತವೆ. ಸಾಮಾನ್ಯವಾಗಿ ಕೆಲವನ್ನು ಪರಿಶಿಷ್ಟ ಪಂಗಡ ಮಹಿಳೆಯರು ಈ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಬೇಡ ಸಮುದಾಯದವರಿಗೆ ಮೂಲಭೂತ ಸೌಲಭ್ಯಗಳಾದ ಚರಂಡಿ ಆಸ್ಪತ್ರೆ ಶೌಚಾಲಯ ಕೊರತೆ ಇದೆ. ಅದಕ್ಕಾಗಿ ಈಗಲೂ ಅವರು ಕೆರೆ, ಕಾಲುವೆ, ಹೊಲ ಗದ್ದೆಗಳಲ್ಲಿ ಶೌಚಾಲಯಕ್ಕೆ ಹೋಗುವುದು ರೂಢಿಯಾಗಿ ಬಿಟ್ಟಿದೆ. ಅಕಸ್ಮಾತ್ ಪಟ್ಟಣ ಪಂಚಾಯಿತಿಯವರು ಅದನ್ನು ನಿರ್ಮಿಸಿದರೂ ಅವುಗಳನ್ನು ಸಮರ್ಪಕವಾಗಿ ನಿರ್ಮಿಸಿರುವುದಿಲ್ಲ. ಹೀಗಾಗಿ ಸರಿಯಾಗಿ ವಾಸಕ್ಕೆ ಯೋಗ್ಯವಿರದ ಮನೆಗಳಲ್ಲಿ ವಾಸಿಸುತ್ತಿರುತ್ತಾರೆ. ಇಲ್ಲಿ ಹೆಚ್ಚಾಗಿ ಸಗಣೆ ಕಟ್ಟಿಗೆ ಉರುವಲುಗಳನ್ನು ಇನ್ನು ಅಡುಗೆಗೆ ಬಳಸುತ್ತಿರುವುದು ಕಂಡುಬರುತ್ತವೆ.

**ಅಧ್ಯಯನದ ಫಲಿತಗಳು**

ವ್ಯಕ್ತಿ ಅಧ್ಯಯನ ಮಾಡುವ ಸಂದರ್ಶನದಲ್ಲಿ ಬೇಡ ಸಮುದಾಯದ ಮಹಿಳೆಯರು ಯಾವ ಯಾವ ವಲಯಗಳಲ್ಲಿ ಇವರ ಪಾತ್ರ ಇತ್ತೆಂಬುದನ್ನು ಅವಲೋಕಿಸಲು ಈ ಅಂಶಗಳು ನೆರವಾಗಿವೆ. ಅದರಲ್ಲಿ ಕೃಷಿ, ಸರ್ಕಾರಿ ಕೆಲಸ, ಖಾಸಗಿ ಕೆಲಸ, ಇವರ ರಾಜಕೀಯ ಪ್ರವೇಶ ಆರ್ಥಿಕ ಸ್ಥಿತಿಗತಿಯ ಅಂಶಗಳು ಕುರಿತು ಗಮನ ಸೆಳೆದ ಅಂಶಗಳಾಗಿವೆ. ಮಹಿಳೆಯರನ್ನು ಸಂದರ್ಶಿಸಿದಾಗ ಕೆಲವೊಂದು ಅಭಿಪ್ರಾಯಗಳನ್ನು ಈ ಕೆಳಗೆ ನೀಡುತ್ತಿದ್ದೇನೆ.

ಇಂದಿಗೂ ಬೇಡ ಮಹಿಳೆಯರ ಆರ್ಥಿಕ ಸಬಲತೆ ಆಗುತ್ತಿಲ್ಲ. ಹೆಚ್ಚು ಆದಾಯ ಬರುವ ದುಡಿಮೆಗಳಲ್ಲಿ ತೊಡಗಲು ಶೈಕ್ಷಣಿಕ ಅರ್ಹತೆ ಇಲ್ಲದಿರುವುದು.

ಅಕ್ಷರ ಓದಿದ್ದರೆ ಸರ್ಕಾರಿ ಅಥವಾ ಖಾಸಗಿ ವಲಯದಲ್ಲಿ ಕೆಲಸ ಮಾಡಿ ನೌಕರಿಯಿಂದ ಹೆಚ್ಚು ಸಂಪಾದಿಸಬಹುದು ಎಂದು ಇವರ ನಂಬಿದ್ದಾರೆ.

ತಾವು ಮಾಡುವ ಕೂಲಿ ಕೆಲಸದಲ್ಲಿ ಯಾವುದೇ ಬಗೆಯ ಹೆಚ್ಚಿನ ಕೆಲಸ ಮಾಡಿದರೂ ಸಹ ಕೆಲಸಕ್ಕಿಂತ ತಕ್ಕಂತೆ ಕೂಲಿಯು ದೊರೆಯುತ್ತಿಲ್ಲ.

ಎಲ್ಲ ಮೇಲ್ವರ್ಗದ ಸಾವುಕಾರರು, ಧಣಿಗಳು, ಸ್ವಾಮಿಗಳು ಕೂಲಿಯನ್ನು ಒಂದೇ ರೀತಿಯಲ್ಲಿ ನಿರ್ಧರಿಸುತ್ತಾರೆ.

ಪುರುಷರಿಗಿಂತ ಮಹಿಳೆಯರು ಕಡಿಮೆ ಶಿಕ್ಷಣ ಪಡೆದಿದ್ದಾರೆ. ಸ್ವಲ್ಪಮಟ್ಟಿಗೆ ಇಂದೂ ಬದಲಾವಣೆ ಆಗುತ್ತಲಿದೆ. ಇದಕ್ಕೆ ಕಾರಣ ಈ ಸಮುದಾಯದ ಆರ್ಥಿಕ ಸ್ಥಿತಿ ಎಂಬುದು ಸ್ಪಷ್ಟವಾಗುತ್ತದೆ.

ಕಮಲಾಪುರದಲ್ಲಿ ಒಟ್ಟು ನಾನು ಸಂದರ್ಶಿಸಿದ ಕೇರಿಗಳಲ್ಲಿ ಪ್ರತಿ ಕೇರಿ ೪೦ ಮಹಿಳೆಯರನ್ನು ಸಂದರ್ಶಿಸಿ ನೋಡಿದಾದ ಕೆಲವೇ ಕುಟುಂಬಗಳಿಗೆ ಭೂಮಿ ಇದೆ. ಇನ್ನು ಉಳಿದ ಎಲ್ಲ ಮಹಿಳೆಯರ ಕುಟುಂಬಗಳು ಕೃಷಿ, ಕೂಲಿಯನ್ನೇ ಅವಲಂಬಿಸಿದ್ದಾರೆ.

ಮುಖ್ಯವಾಗಿ ಕಂಡುಬರುವ ಅಂಶವೇನೆಂದರೆ ಮಹಿಳೆಯರ ಹೆಸರಿನ ಮೇಲೆ ಭೂಮಿ ಇರುವುದು ಕೇವಲ ಬೆರಳಕೆಯಷ್ಟು ಮಾತ್ರ. ಬೇಡ ಮಹಿಳೆಯರ ಹೆಚ್ಚಾಗಿ ಕೂಲಿ ಕೆಲಸ, ಕೃಷಿ ಕೆಲಸ ಮಾಡುತ್ತಾರೆ. ಕೆಲವು ಮಹಿಳೆಯರ ಮಾತ್ರ ಬೇರೆ ಬೇರೆ ಕೆಲಸ ಮಾಡುವುದು ಕಂಡುಬರುತ್ತದೆ.

ಬೇಡ ಮಹಿಳೆಯರಿಗೆ ಬಹುತೇಕ ಕುಟುಂಬಗಳಿಗೆ ವಾಸಿಸಲು ಯೋಗ್ಯ ಮನೆ ಇಲ್ಲದಿರುವುದು ಕಂಡುಬರುತ್ತದೆ. ಬೇಡ ಮಹಿಳೆಯರ ಗಂಡು ಮಕ್ಕಳು ಹೆಚ್ಚಾಗಿ ಕೆಲವೊಂದು ಚಟಗಳಿಗೆ ಬಲಿಯಾಗಿದ್ದಾರೆ. ಕುಡಿತ, ಓಸಿ, ಇಸ್ಪೇಟ್ ಮುಂತಾದ ವ್ಯಸನಗಳಿಗೆ ತುತ್ತಾಗಿರುವುದು ಕಂಡುಬರುತ್ತದೆ.

ಕಮಲಾಪುರದಲ್ಲಿ ರಾಜಕೀಯ ಸ್ಥಿತಿಯನ್ನು ನೋಡಿದಾಗ ೭ ಕೇರಿಗಳಲ್ಲಿ ಒಟ್ಟು ಮಹಿಳೆಯರ ರಾಜಕೀಯ ಪ್ರವೇಶ ಕೇವಲ ೪ ಜನ ಮಹಿಳೆಯರು ಕಂಡುಬರುತ್ತಾರೆ. ಆದರೂ ಸುಮಾರು ವರ್ಷಗಳಿಂದ ಇಲ್ಲಿನ ರಾಜಕೀಯ ಅಳ್ವಿಕೆ, ಪುರುಷರದ್ದಾಗಿದೆ.

ಒಟ್ಟಾರೆಯಾಗಿ ಈ ಒಂದು ಅಧ್ಯಯನದಿಂದಾಗಿ ಮಹಿಳೆಯರು ಸ್ವಲ್ಪಮಟ್ಟಿಗೆಯಾದರೂ ಸುಧಾರಣೆ ಕಾಣಬೇಕೆಂಬ ಶಿಕ್ಷಣದ ಪ್ರಮಾಣ ಹೆಚ್ಚಾಗಬೇಕು. ಸರಕಾರದ ಯೋಜನೆಗಳ ಬಗ್ಗೆ ಅವರಿಗೆ ಸಮರ್ಪಕವಾದ ತಿಳುವಳಿಕೆಯನ್ನುಂಟು ಮಾಡುವುದರ ಜೊತೆಗೆ ಅವುಗಳನ್ನು ಬಳಸಿಕೊಳ್ಳಲು ಅವಕಾಶವನ್ನು ತಲುಪುವಂತೆ ನೋಡಿಕೊಳ್ಳುವುದು ಈ ಅಧ್ಯಯನದ ಅಂಶವಾಗಿದೆ.

**ಸಲಹೆಗಳು**

- ಕ್ಷೇತ್ರಕಾರ್ಯದಿಂದ ಅನುಭವ ಹಾಗೂ ಅವರೊಡನೆ ಇದ್ದ ದೀರ್ಘ ಒಡನಾಟದ ಹಿನ್ನೆಲೆಯಲ್ಲಿ ಬೇಡ ಸಮುದಾಯದ ಆರ್ಥಿಕತೆಯನ್ನು ಅಧ್ಯಯನ ಮಾಡುವುದರ ಮೂಲಕ ಕೆಲವು ಸಲಹೆಗಳನ್ನು ಈ ಕೆಳಗಿನಂತೆ ನೀಡಲಾಗಿದೆ. ಈ ಸಲಹೆಗಳನ್ನು ನನ್ನ ಒಟ್ಟಾರೆಯ ಅಧ್ಯಯನದ ಭಾಗವಾಗಿ ಹೊರಹೊಮ್ಮಿದ ಅಂಶವೇನೆಂದರೆ ಕೆಲವೊಂದು ಆಯೋಗಗಳಲ್ಲಿ ಉದಾ: ಹವಾನೂರ್ ಆಯೋಗ ಇಂತಹ ಆಯೋಗಗಳಲ್ಲಿ ಇಡೀ ಸಮುದಾಯವನ್ನು ಗುರುತಿಸುತ್ತವೆ. ಹೊರತು ಆ ಸಮುದಾಯದಲ್ಲಿನ ಮಹಿಳೆಯರಿಗೆ ಇರುವ ಅವಕಾಶಗಳೇನು? ಅವನ್ನು ಹೇಗೆ ಬಳಸಿಕೊಳ್ಳಬೇಕು ಎಂಬುದನ್ನು ತಲುಪುವಂತೆ ಆಯೋಗಗಳು ರಚನೆಯಾಗಬೇಕು.

- ಮಹಿಳೆಯರ ಜನಗಣತಿಯನ್ನು ಮಾಡಿ ಹೆಚ್ಚಾಗಿದ್ದರೆ ಅವರಿಗೆ ಎಂತಹ ಯೋಜನೆಗಳನ್ನು ರೂಪಿಸುವುದು ತುಂಬಾ ಅತ್ಯವಶ್ಯಕ.
- ಮಹಿಳಾ ಸ್ವ-ಸಹಾಯ ಗುಂಪುಗಳಿಗೆ ಹೆಚ್ಚಿನ ನೆರವನ್ನು ಮತ್ತು ಅವರ ತರಬೇತಿಗಾಗಿ ವಿವಿಧ ಕಾರ್ಯಕ್ರಮಗಳಿಗೆ ಆರ್ಥಿಕ ನೆರವನ್ನು ನೀಡುವುದು.
- ಬೇಡ ಸಮುದಾಯದ ಮಹಿಳೆಯರಲ್ಲಿರುವ ಕೌಶಲ್ಯವನ್ನು ಗುರುತಿಸುವುದು. ಮತ್ತು ಅವರ ವಿವಿಧ ವೃತ್ತಿಗಳಗನುಸಾರವಾಗಿ ಕೂಲಿಯ ನಿರ್ಧರಿಸಬೇಕು. ಕೂಲಿಯಲ್ಲಿ ತಾರತಮ್ಯವಿರುವುದರಿಂದ ಇದನ್ನು ತಡೆಗಟ್ಟುವುದು ಉತ್ತಮ.
- ಮಹಿಳೆಯರು ತರಕಾರಿಗಳನ್ನು ಮಾರಾಟ ಮಾಡುವಾಗ ತಲೆಯ ಮೇಲೆ ಹೊತ್ತುಕೊಂಡು ಮಾರಾಟ ಮಾಡುತ್ತಾರೆ. ಇವರಿಗೆ ನಿರ್ದಿಷ್ಟ ಸ್ಥಳ ನೀಡಿ ಜಾಕತಿಯನ್ನು ನಿಲ್ಲಿಸಬೇಕು.
- ಬೇಡ ಸಮುದಾಯದ ಮಕ್ಕಳಿಗೆ ಕನ್ನಡದ ಜೊತೆಗೆ ಇಂಗ್ಲಿಷ್ ಶಾಲೆಯಲ್ಲಿ ಭಾಷೆಯನ್ನು ಹೆಚ್ಚಾಗಿ ಕಲಿಸಬೇಕು.
- ಮಕ್ಕಳಿಗೆ ಪಾಲಕರು ಕೆಟ್ಟ ಚಟಗಳ ಬಗ್ಗೆ ಅರಿವು ಮೂಡಿಸಬೇಕು ಜೊತೆಗೆ ಆಗಾಗ ಅವರನ್ನು ಅವಲೋಕನ ಮಾಡಿ ಶಾಲೆಗೆ ಭೇಟಿ ನೀಡಿ ಅವರ ಪ್ರಗತಿ ಹೇಗಿದೆ ಎಂದೂ ಪರೀಕ್ಷೆ ಮಾಡಬೇಕು. ಹೆಣ್ಣು ಮಕ್ಕಳಿಗೆ ಹೆಚ್ಚಿನ ಶಿಕ್ಷಣ ನೀಡಬೇಕು.
- ವಿವಿಧ ಪ್ರತಿಭಾವಂತ ವಿದ್ಯಾರ್ಥಿಗಳನ್ನು ಗುರುತಿಸಿ ಸರಕಾರ ಅವರಿಗೆ ನೆರವು ನೀಡುವುದು ಅವಶ್ಯಕವಾಗಿದೆ
- ಮನೆಯಿಲ್ಲದವರಿಗೆ ಮನೆಯನ್ನು ನಿರ್ಮಾಣ ಮಾಡಬೇಕು
- ಬೇಡ ಮಹಿಳೆಯರ ಸುರಕ್ಷಿತಗಾಗಿ ರಾಷ್ಟ್ರೀಯ ಮಹಿಳಾ ಆಯೋಗದ ಮುಖಾಂತರ ವಿಶೇಷ ತಂಡ ನಿರ್ಮಿಸಿ ಅವರಿಗೆ ನೆರವಾಗಬೇಕು.
- ವಿಶೇಷ ಮಹಿಳಾ ಶಾಲೆಗಳನ್ನು ಪ್ರಾರಂಭಿಸಿ ಮುಂದೆ ಪ್ರತಿಯೊಬ್ಬ ಮಹಿಳೆ ಶಿಕ್ಷಣ ಪಡೆಯುವಂತಾಗಬೇಕು. ಮಹಿಳೆಯರಿಗೆ ಅವಶ್ಯಕವಾಗಿ ಉನ್ನತ ಶಿಕ್ಷಣಕ್ಕೆ ಹೋಗಲು ಅವಕಾಶಗಳನ್ನು ಕಲ್ಪಿಸಿಕೊಡಬೇಕು.
- ಪುರುಷರ ದೌರ್ಜನ್ಯದಿಂದ, ಶೋಷಣೆ ಮಹಿಳೆಯರನ್ನು ಜಾಗೃತಿಗೊಳಿಸುವ ಕಾರ್ಯಕ್ರಮಗಳನ್ನು ರೂಪಿಸಬೇಕು.

# ಪರಾಮರ್ಶನ ಗ್ರಂಥಗಳು


೧. ಅಯ್ಯಾಳಿ ಯರ್ರಿಸ್ವಾಮಿ, **ಹಂಪಿ ಪರಿಸರದ ಐತಿಹ್ಯಗಳು:** ಚಾರಿತ್ರಿಕ ವಿಶ್ಲೇಷಣೆ, ಅಪ್ರಕಟಿತ ಎಂ.ಫಿಲ್ ನಿಬಂಧ, ೨೦೧೦, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಆಂಜನೇಯ, ಮ್ಯಾಸಬೇಡರ ಕನ್ನಡ ಸಮಾಜೋ-ಭಾಷಿಕ ಅಧ್ಯಯನ (ಭಾಷಾ ನಿಕಾಯ ವಿಭಾಗ) ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೩. ಎಚ್ಚಾರ್ಕೆ, ಭಾರತದ ಆರ್ಥಿಕ ಅಭಿವೃದ್ಧಿ, ೨೦೧೨-೧೩, ಸಪ್ನಬುಕ್‌ಹೌಸ್, ಬೆಂಗಳೂರು.

೪. ಕರಿಶೆಟ್ಟಿ ರುದ್ರಪ್ಪ, ಮ್ಯಾಸನಾಯಕರ ಒಂದು ಅಧ್ಯಯನ, ೧೯೯೫, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫. ಗಂಗಾಧರ ದೈವಜ್ಞ, ಬುಡಕಟ್ಟು ಹುಟ್ಟು-ಸಾವಿನ ನಡುವೆ, ೨೦೧೩, ಪ್ರಸಾರಾಂಗ, ಕನ್ನಡ ವಿ.ವಿ, ಹಂಪಿ

೬. ಗಾಯಿತ್ರಿ ಎನ್, ಮಹಿಳಾ ಮೀಸಲಾತಿ ಮತ್ತು ಲಿಂಗರಾಜಕಾರಣ, ಲಡಾಯಿ ಪ್ರಕಾಶನ, ಗದಗ, ೨೦೦೨.

೭. ಚಂದ್ರಶೇಖರ್ ಟಿ.ಆರ್, ಲಿಂಗ ಸಂಬಂಧಿ ಅಭಿವೃದ್ಧಿ ಅಧ್ಯಯನ ಪ್ರಬಂಧಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೮. ಚನ್ನಮ್ಮ ಕೆ.ಸಿ, ಮಹಿಳೆಯ ದುಡಿಮೆ ಏಕರೂಪತೆಯ ಪ್ರಶ್ನೆ, ೨೦೧೦, ಪ್ರಸಾರಾಂಗ, ಕವಿವಿ, ಹಂಪಿ

೯. ಜನಾರ್ದನ, ಭಿಕ್ಷುಕರ ಬದುಕು ಒಂದು ಪ್ರಾಯೋಗಿಕ ಅಧ್ಯಯನ, ೨೦೧೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೦. ಜ್ಯೋತಿ ಶಶಿಕುಮಾರ್, ಮಹಿಳಾ ಸಾಮಾಜಿಕತೆ, ಮಹಿಳಾ ಅಧ್ಯಯನ ಕೇಂದ್ರ, ೨೦೦೭, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧. ತಾರಿಹಳ್ಳಿ ಹನುಮಂತಪ್ಪ, ಕಮಲಾಪುರ ಬೇಡ ನಾಯಕ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಗಳು, ೨೦೧೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೨. ತಾರಿಹಳ್ಳಿ ಹನುಮಂತಪ್ಪ, ಕರ್ನಾಟಕ ಬುಡಕಟ್ಟು ಸಮುದಾಯಗಳು, ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೩. ದುರುಗಪ್ಪ ಎಂ.ಕೆ, ವಿಜಯನಗೋರತ್ತರ ಕಾಲದ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು (ಅಪ್ರಕಟಿತ ಪಿಎಚ್.ಡಿ. ಪ್ರಬಂಧ), ೨೦೦೩, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೪. ದೇವರಾಜ ಒ, ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ದಲಿತರು, ೨೦೧೫, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೧೫. ದೇವಿಪ್ರಸಾದ್ ಚಟ್ಟೋಪಾಧ್ಯಾಯ, ಮಾತೆಯರು ಮಾನ್ಯರಾಗಿದ್ದಾಗ, ೨೦೧೪, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು

೧೬. ನಾಗೇಶ್ ಎಚ್.ಎ, ಕರ್ನಾಟಕ ಬುಡಕಟ್ಟುಗಳಲ್ಲಿ ನ್ಯಾಯ ತೀರ್ಮಾನ, ೨೦೦೩, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ.

೧೭. ಪ್ರಭಾಕರ ಎ.ಎಸ್, ಮ್ಯಾಸಬೇಡರ ಕಥಚನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೮. ಪ್ರಶಾಂತ ಎಚ್.ಡಿ, ಶೈಕ್ಷಣಿಕತ ಪ್ರೇರಕಾಂಶಗಳ ಸಾಮಾಜಿಕ ಆಯಾಮಗಳು, ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೯. ಬೋರಲಿಂಗಯ್ಯ ಹಿ.ಚಿ, ಬುಡಕಟ್ಟು ದೈವಾರಾದನೆ, ೨೦೦೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦. ಮಹಾದೇವ ಸಿ ಮತ್ತು ಇತರರು, ಹೊಸಪೇಟೆ ತಾಲೂಕು ದರ್ಶನ, ೨೦೦೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೧. ಲಕ್ಷ್ಮಿದೇವಿ ಎಲ್, ಬೇಟೆ ಪರಂಪರೆ ಬೇಡರ ಸಂಸ್ಕೃತಿ, ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨೨. ಲೀಲಾಪಾಟೀಲ್ ವಿಠಲರಾವ್ ಕಾಯಕ್ವಾಡ್, ಭಾರತೀಯ ಸ್ತ್ರೀ ಜೀವನ, ೨೦೦೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೩. ವಸುಂಧರ ಫಿಲಿಯೋಜ, ಅಳಿದುಳಿದ ಹಂಪೆ, ೧೯೮೨, ಮಾನಸೋಲ್ಲಾಸ ಪ್ರಕಾಶನ, ಬೆಂಗಳೂರು.
೨೪. ವಿರೂಪಾಕ್ಷಿ ಪೂಜಾರಹಳ್ಳಿ, ಕರ್ನಾಟಕದಲ್ಲಿ ತಳವಾರಿಕೆ, ೨೦೦೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨೫. ವೀರೇಂದ್ರ ಶೀಲವಂತ, ಕೃಷಿ ಆಚರಣೆಗಳು, ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೬. ವಿರೂಪಾಕ್ಷಿ ಪೂಜಾರಹಳ್ಳಿ, ಬೇಡ ಬುಡಕಟ್ಟಿನ ಚರಿತ್ರೆ ಮತ್ತು ಸಂಸ್ಕೃತಿ, ೨೦೦೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೭. ವಿರಕ್ತಮಠ ಎಸ್.ಶಿವಾನಂದ, ಮಹಿಳಾ ಆರ್ಥಿಕತೆ(ಲೇ), ಮಹಿಳಾ ಅಧ್ಯಯನ ಸಂಯುಕ್ತ ಸಂಚಿಕೆ, ೨೦೦೫, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೨೮. ವೀರಭದ್ರನಾಯಕ್, ಶಿಕ್ಷಣ ವಂಚಿತ ಬುಡಕಟ್ಟುಗಳು, ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೨೯. ವಿರೂಪಾಕ್ಷಿ ಪೂಜಾರಹಳ್ಳಿ, ಬೇಟೆ ಮತ್ತು ಬೇಡರು, ೨೦೦೭, ಚಿನ್ನಹಗರಿ ಪ್ರಕಾಶನ, ಕೂಡ್ಲಿಗಿ.
೩೦. ವೀಣಾ ಎಂ.ಪಿ, ಮನೆ ಸಮಾಜ ಮತ್ತು ಸಂಸ್ಕೃತಿ, ೧೯೯೫, ಅಪ್ರಕಟಿತ ಎಂ.ಫಿಲ್ ಪ್ರಬಂಧ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೩೧. ಶ್ರೀಕಂಠಯ್ಯ ಕೆ, ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಸಾಮಾಜಿಕ ಆರ್ಥಿಕ ರಾಜಕೀಯ ಜೀವನ ಚರಿತ್ರೆ, ೧೯೮೩, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
೩೨. ಶ್ರೀದೇವಿ ವಿ. ಆಲೂರು, ಶೈಕ್ಷಣಿಕ ವಲಯದಲ್ಲಿ ಮಹಿಳಾ ದೌರ್ಜನ್ಯದ ನೆಲೆಗಳು, ೨೦೦೨, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೩೩. ಶ್ರೀದೇವಿ ವಿ.ಆಲೂರು, ಮಹಿಳಾ ಅಸ್ತಿತ್ವದ ಹುಡುಕಾಟ, ೨೦೧೦, ಸಾಹಿತ್ಯ ಮಾಲಿಕೆ, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೩೪. ಶ್ರೀನಿವಾಸ ಎಲ್., ಪರಿವರ್ತನೆಯ ಹಾದಿಯಲ್ಲಿ ಬುಡಕಟ್ಟು ಸಮಾಜಗಳು, ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೩೫. ಸೋಮಶೇಖರ್ ಎಸ್.ವೈ, ಹಂಪಿಯ ಬಜಾರಗಳು, ೧೯೯೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೩೬. ಸೋಮಶೇಖರ್ ಎಸ್.ವೈ, ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧನೀತಿ, ೨೦೦೯, ಸಂಚಿಕೆ, ಪ್ರಕಾಶ, ಚಿತ್ರದುರ್ಗ.

**English Books**

1. Devakunjari, Hampi, Archaeological Survey of India, Delhi, 1970
2. Mahalingam T.V., Economic life in the Vijayanagara Empire, Madras, 1951
3. Robert Civil, A Forgetton Empire, Asian Educational Service, New Delhi, 1991, Madeas.

# ಮಾಹಿತಿದಾರರ ವಿವರ

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ವಿಳಾಸ |
|---|---|---|---|---|
| ೧. | ಪೂಜಾರಿ ನಿಂಗಮ್ಮ | ೫೫ | ಪೂಜಾರಿ | ೧೪ನೇ ವಾರ್ಡ್, ತಿಮ್ಮನಾಥಕೇರಿ, ಕಮಲಾಪುರ, ಹೊಸಪೇಟೆ ತಾಲೂಕು |
| ೨. | ಗಿಂಜಿ ಬೊಮ್ಮಕ್ಕ | ೬೦ | ಕೂಲಿ | ೧೪ನೇ ವಾರ್ಡ್, ತಿಮ್ಮನಾಥಕೇರಿ, ಕಮಲಾಪುರ, ಹೊಸಪೇಟೆ ತಾಲೂಕು |
| ೩. | ಪತ್ರಿ ಭರಮವ್ವ | ೪೦ | ಕೂಲಿ | ೧೪ನೇ ವಾರ್ಡ್, ತಿಮ್ಮನಾಥಕೇರಿ, ಕಮಲಾಪುರ, ಹೊಸಪೇಟೆ ತಾಲೂಕು |
| ೪. | ಶಿವಗಂಗಮ್ಮ | ೪೨ | ಮನೆಗೆಲಸ | ೧೪ನೇ ವಾರ್ಡ್, ತಿಮ್ಮನಾಥಕೇರಿ, ಕಮಲಾಪುರ, ಹೊಸಪೇಟೆ ತಾಲೂಕು |
| ೫. | ಸುಮ | ೩೫ | ಸರ್ಕಾರಿ ತಾತ್ಕಾಲಿಕ ಸಿಬ್ಬಂದಿ | ೧೪ನೇ ವಾರ್ಡ್, ತಿಮ್ಮನಾಥಕೇರಿ, ಕಮಲಾಪುರ, ಹೊಸಪೇಟೆ ತಾಲೂಕು |
| ೬. | ಗುರಮ್ಮ | ೫೦ | ಕೂಲಿ | ೧೪ನೇ ವಾರ್ಡ್, ತಿಮ್ಮನಾಥಕೇರಿ, ಕಮಲಾಪುರ, ಹೊಸಪೇಟೆ ತಾಲೂಕು |
| ೭. | ಪಕೀರವ್ವ | ೫೦ | ಕೂಲಿ | ೧೪ನೇ ವಾರ್ಡ್, ತಿಮ್ಮನಾಥಕೇರಿ, ಕಮಲಾಪುರ, ಹೊಸಪೇಟೆ ತಾಲೂಕು |
| ೮. | ಸಣ್ಣ ಹನುಮವ್ವ | ೬೦ | ಕೃಷಿಕೂಲಿ | ೧೪ನೇ ವಾರ್ಡ್, ತಿಮ್ಮನಾಥಕೇರಿ, ಕಮಲಾಪುರ, ಹೊಸಪೇಟೆ ತಾಲೂಕು |
| ೯. | ಮಾರಕ್ಕ | ೬೦ | ವ್ಯಾಪಾರ | ೧೪ನೇ ವಾರ್ಡ್, ತಿಮ್ಮನಾಥಕೇರಿ, ಕಮಲಾಪುರ, ಹೊಸಪೇಟೆ ತಾಲೂಕು |
| ೧೦. | ಈರಕ್ಕ | ೬೦ | ವ್ಯಾಪಾರ | ೧೪ನೇ ವಾರ್ಡ್, ತಿಮ್ಮನಾಥಕೇರಿ, ಕಮಲಾಪುರ, ಹೊಸಪೇಟೆ ತಾಲೂಕು |
| ೧೧. | ಬಸಮ್ಮ ಗೊಂಚಿಗಾರ | ೬೦ | ತರಕಾರಿ ವ್ಯಾಪಾರ | ೧೪ನೇ ವಾರ್ಡ್, ತಿಮ್ಮನಾಥಕೇರಿ, ಕಮಲಾಪುರ, ಹೊಸಪೇಟೆ ತಾಲೂಕು |
| ೧೨. | ಸುಮಂಗಳ | ೩೪ | ಕೂಲಿ | ೧೪ನೇ ವಾರ್ಡ್, ತಿಮ್ಮನಾಥಕೇರಿ, ಕಮಲಾಪುರ, ಹೊಸಪೇಟೆ ತಾಲೂಕು |
| ೧೩. | ಶಾಂತವ್ವ | ೪೪ | ದೇವಸ್ಥಾನದ ಸೇವೆ | ೧೬ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೧೪. | ಕಾಳಮ್ಮ | ೬೧ | ಕೂಲಿ | ೧೬ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೧೫. | ಲಿಂಗಮ್ಮ | ೬೦ | ದೇವಸ್ಥಾನದ ಕೆಲಸ | ೧೬ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೧೬. | ನಿಂಗಮ್ಮ ಹೆಚ್. | ೪೯ | ಕೂಲಿ | ೧೬ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೧೭. | ಪಾರಮ್ಮ | ೬೦ | ಕೃಷಿಕೆಲಸ | ೧೪ನೇ ವಾರ್ಡ್, ತಿಮ್ಮನಾಥಕೇರಿ, ಕಮಲಾಪುರ |

| | | | | |
|---|---|---|---|---|
| ೧೮. | ಈಶ್ವರಮ್ಮ | ೬೩ | ಮನೆಗೆಲಸ | ೧೬ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೧೯. | ಈರಮ್ಮ ಮಾಳಗಿ | ೪೧ | ಕೂಲಿ | ೧೬ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೨೦. | ಹಂಪಮ್ಮ | ೬೦ | ಕುರಿಸಾಕಾಣಿಕೆ | ೧೬ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೨೧. | ಗೌರಮ್ಮ | ೬೦ | ಕೂಲಿ | ೧೭ನೇ ವಾರ್ಡ್, ಗೋನಾಳಕೇರಿ, ಕಮಲಾಪುರ |
| ೨೨. | ನೀಲಮ್ಮ | ೫೫ | ಕೂಲಿ | ೧೭ನೇ ವಾರ್ಡ್, ಗೋನಾಳಕೇರಿ, ಕಮಲಾಪುರ |
| ೨೩. | ಮಾರೆಮ್ಮ ಜೀನೂರು | ೫೬ | ಕಟ್ಟಿಗೆ ಮಾರುವುದು | ೧೭ನೇ ವಾರ್ಡ್, ಗೋನಾಳಕೇರಿ, ಕಮಲಾಪುರ |
| ೨೪. | ದುರುಗಮ್ಮ | ೪೬ | ಕೂಲಿ/ಕೃಷಿ | ೧೫ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೨೫. | ಪಾಲಮ್ಮ | ೩೪ | ಕೃಷಿ/ಕೂಲಿ | ೧೫ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೨೬. | ಪಾರ್ವತಮ್ಮ | ೪೫ | ಕೂಲಿ | ೧೫ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೨೭. | ದುರುಗಮ್ಮ | ೩೦ | ಕೂಲಿ | ೧೫ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೨೮. | ನಾಗಮ್ಮ | ೪೨ | ಕೃಷಿ | ೧೫ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೨೯. | ಮಾರೆಮ್ಮ ಪೂಜಾರಿ | ೪೧ | ದೇವಸ್ಥಾನ ಪೂಜಾಕಾರ್ಯ | ೧೫ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೩೦. | ಈರಮ್ಮ | ೩೭ | ದೇವಸ್ಥಾನದ ಪೂಜಾಕಾರ್ಯ | ೧೫ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೩೧. | ನಾಗಮ್ಮ | ೨೯ | ಸರಕಾರಿ ಅರೆಕಾಲಿಕ | ೧೫ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೩೨. | ಹನುಮಕ್ಕ ಮೂಲಿಮನಿ | ೪೯ | ಕೇಂದ್ರ ಸರಕಾರಿ ನೌಕರ | ೧೫ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೩೩. | ಗಂಗವ್ವ ಮೂಲಿಮನಿ | ೪೮ | ತರಕಾರಿ ವ್ಯಾಪಾರ | ೧೫ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೩೪. | ಹಂಪಮ್ಮ ಮಾಳಿಗೆ | ೪೯ | ತೋಟಗಾರಿಕೆ/ಕೃಷಿ | ೧೫ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೩೫. | ಹನುಮಕ್ಕ | ೪೯ | ಕೇಂದ್ರ ಸರಕಾರಿ ಅರೆಕಾಲಿಕ ನೌಕರಿ | ೧೫ನೇ ವಾರ್ಡ್, ಹಿರೇಕೇರಿ, ಕಮಲಾಪುರ |

| | | | | |
|---|---|---|---|---|
| ೩೬. | ನರಗಲ್ಲಮ್ಮ | ೫೪ | ದೇವಸ್ಥಾನದ ಕಾರ್ಯ | ೧೫ನೇ ವಾರ್ಡ್, ಹಿರೇಕೇರಿ, ಕಮಲಾಪುರ |
| ೩೭. | ಮಾರಮ್ಮ | ೩೫ | ಕೂಲಿ | ೧೭ನೇ ವಾರ್ಡ್ ಬಂಡೆಕೇರಿ, ಕಮಲಾಪುರ |
| ೩೮. | ಶಾಂತಮ್ಮ | ೩೯ | ಕೂಲಿ | ೧೭ನೇ ವಾರ್ಡ್ ಬಂಡೆಕೇರಿ, ಕಮಲಾಪುರ |
| ೩೯. | ಲಕ್ಷ್ಮೀ | ೪೦ | ಕೂಲಿ | ೧೭ನೇ ವಾರ್ಡ್ ಬಂಡೆಕೇರಿ, ಕಮಲಾಪುರ |
| ೪೦. | ಒಬಕ್ಕ | ೬೦ | ಕೂಲಿ | ೧೭ನೇ ವಾರ್ಡ್ ಬಂಡೆಕೇರಿ, ಕಮಲಾಪುರ |
| ೪೧. | ಗಾಳೆಮ್ಮ | ೪೫ | ಕೂಲಿ/ವ್ಯಾಪಾರ | ೧೭ನೇ ವಾರ್ಡ್ ಬಂಡೆಕೇರಿ, ಕಮಲಾಪುರ |
| ೪೨. | ನಾಗಮ್ಮ | ೩೦ | ಕೂಲಿ | ೧೭ನೇ ವಾರ್ಡ್ ಬಂಡೆಕೇರಿ, ಕಮಲಾಪುರ |
| ೪೩. | ದುರುಗಮ್ಮ | ೪೫ | ಕೂಲಿ | ೧೭ನೇ ವಾರ್ಡ್ ಬಂಡೆಕೇರಿ, ಕಮಲಾಪುರ |
| ೪೪. | ಬೊಮ್ಮಮ್ಮ | ೪೦ | ಕೂಲಿ | ೧೭ನೇ ವಾರ್ಡ್ ಬಂಡೆಕೇರಿ, ಕಮಲಾಪುರ |
| ೪೫. | ಒನ್ನಾಪರಪ್ಪ | ೩೫ | ಕೂಲಿ | ೧೭ನೇ ವಾರ್ಡ್ ಬಂಡೆಕೇರಿ, ಕಮಲಾಪುರ |
| ೪೬. | ಶಾಂತಮ್ಮ | ೩೦ | ಕೃಷಿಕೂಲಿ | ೧೭ನೇ ವಾರ್ಡ್ ಬಂಡೆಕೇರಿ, ಕಮಲಾಪುರ |
| ೪೭. | ಹುಸೇನವ್ವ | ೭೦ | ಕೂಲಿ | ೧೭ನೇ ವಾರ್ಡ್ ಬಂಡೆಕೇರಿ, ಕಮಲಾಪುರ |
| ೪೮. | ಬೊಮ್ಮವ್ವ | ೪೦ | ಕೂಲಿ | ೧೮ನೇ ವಾರ್ಡ್, ತಳವಾರ ಕೇರಿ, ಕಮಲಾಪುರ |
| ೪೯. | ನೀಲಕ್ಕ | ೩೨ | ಕೂಲಿ | ೧೮ನೇ ವಾರ್ಡ್, ತಳವಾರ ಕೇರಿ, ಕಮಲಾಪುರ |
| ೫೦. | ಅಶ್ವಿನಕ್ಕ | ೪೦ | ಕೃಷಿ | ೧೮ನೇ ವಾರ್ಡ್, ತಳವಾರ ಕೇರಿ, ಕಮಲಾಪುರ |
| ೫೧. | ಶ್ವೇತಾ | ೩೦ | ಅಂಗನವಾಡಿ ಕಾರ್ಯಕರ್ತೆ | ೧೮ನೇ ವಾರ್ಡ್, ತಳವಾರ ಕೇರಿ, ಕಮಲಾಪುರ |
| ೫೨. | ಮಾರೆಮ್ಮ | ೩೫ | ಕೃಷಿ | ಮನ್ಮಥಕೇರಿ, ಕಮಲಾಪುರ |
| ೫೩. | ಗಂಗಮ್ಮ | ೩೯ | ಕೂಲಿ | ಚೌಡಿಕೇರಿ, ಕಮಲಾಪುರ |
| ೫೪. | ದುರುಗಮ್ಮ | ೨೮ | ಕೂಲಿ/ಮನೆಗೆಲಸ | ಹಿರೇಕೇರಿ, ಕಮಲಾಪುರ |
| ೫೫. | ಹನುಮಂತಿ | ೩೦ | ಕೂಲಿ | ಚೌಡಿಕೇರಿ, ಕಮಲಾಪುರ |
| ೫೬. | ಮಾರಕ್ಕ | ೩೫ | ಖಾಸಗಿ ಅರೆಕಾಲಿಕ ಸಿಬ್ಬಂದಿ | ಚೌಡಿಕೇರಿ, ಕಮಲಾಪುರ |
| ೫೭. | ಒಬಕ್ಕ | ೩೯ | ಕೃಷಿಕೆಲಸ | ಚೌಡಿಕೇರಿ, ಕಮಲಾಪುರ |
| ೫೮. | ಗಾಳೆವ್ವ | ೪೨ | ಕೃಷಿಕೆಲಸ | ಚೌಡಿಕೇರಿ, ಕಮಲಾಪುರ |
| ೫೯. | ಮಾರವ್ವ | ೫೦ | ಕೃಷಿ ಕೆಲಸ | ಚೌಡಿಕೇರಿ, ಕಮಲಾಪುರ |
| ೬೦. | ಮೀನಾಕ್ಷಿ | ೩೫ | ಕೃಷಿಕೂಲಿ | ಚೌಡಿಕೇರಿ, ಕಮಲಾಪುರ |
| ೬೧. | ಸೂರಮ್ಮ | ೪೦ | ಗಾರೆಕೆಲಸ | ಚೌಡಿಕೇರಿ, ಕಮಲಾಪುರ |

## ಪ್ರಶ್ನಾವಳಿ

1. ನಿಮ್ಮ ಕೇರಿಯ ಹೆಸರು.

   ಚೌಡಿಕೇರಿ, ಬಂಡೆಕೇರಿ, ಮನಮಥಕೇರಿ, ಹೀರೆಕೇರಿ, ತಿಮ್ಮನಾಥಕೇರಿ, ಗೋನಲಕೇರಿ, ತಳವಾರಕೇರಿ

2. ನಿಮ್ಮ ಮನೆಯಲ್ಲಿ ಜವಾಬ್ದಾರಿ ಯಾರದು

   ತಂದೆ, ತಾಯಿ, ಮಕ್ಕಳು, ಅಜ್ಜ, ಅಜ್ಜಿ

3. ನಿಮ್ಮ ಮೂಲ ವೃತ್ತಿ ಯಾವುದು

   ಕೃಷಿ, ವ್ಯಾಪಾರ, ಗೃಹ ಕೈಗಾರಿಕೆ, ದಿನಗೂಲಿ

4. ಎಷ್ಟು ವರ್ಷದಿಂದ ಕೃಷಿಯನ್ನು ಮಾಡುತ್ತಿದ್ದರಾ?
5. ನಿಮ್ಮ ಹೊಲದಲ್ಲಿ ವರ್ಷಕ್ಕೆ ಎಷ್ಟು ಬೆಳೆಯನ್ನು ಬೆಳೆಯುತ್ತಿರಿ?
6. ನಿಮ್ಮ ಹೊಲದಲ್ಲಿ ಎಂತಹ ಬೆಳೆಯನ್ನು ಬೆಳೆಯುತ್ತಿರಾ?
7. ಕೃಷಿಯನ್ನು ಬಿಟ್ಟು ಬೇರೆ ಎನದಾರು ಕೆಲಸವನ್ನು ಮಾಡುತ್ತಿರಾ?
8. ಹೊಲದಲ್ಲಿ ಎನಾದರೂ ತರಕಾರಿಗಳನ್ನು ಬೆಳೆಯುತ್ತಿರಾ?
9. ಹೊಲದಲ್ಲಿ ಎಂತಹ ತರಕಾರಿಗಳನ್ನು ಬೆಳೆಯುತ್ತಿರಿ?
10. ಹೊಲದಲ್ಲಿ ಬೆಳೆದಂತಹ ತರಕಾರಿಗಳನ್ನು ಎಲ್ಲಿ ಮಾರುತ್ತಿರಾ.?
11. ನಿಮ್ಮ ಹೊಲದಲ್ಲಿ ಯಾವ ವಿಧದ ನೀರಾವರಿಯನ್ನು ಬಳಸುತ್ತೀರಿ?
12. ನಿಮ್ಮ ಹೊಲದ ಗುಣ ಮತ್ತು ಮಣ್ಣಿನ ವಿಧ ಯಾವುದು?
13. ಕೃಷಿ ಕೆಲಸಕ್ಕೆ ದಿನಗೂಲಿ ಎಷ್ಟು?
14. ಕೃಷಿಯೇತರ ಕೂಲಿಯಲ್ಲಿ ಏನಾದರೂ ತಾರತಮ್ಯ ಇದೆಯೇ?
15. ಕೃಷಿಯಲ್ಲಿ ಎಂತಹ ಕೆಲಸವನ್ನು ಮಾಡುತ್ತೀರಿ?
16. ನಿಮ್ಮ ಹೊಲದಲ್ಲಿನ ವಾರ್ಷಿಕ ಆದಾಯ ಎಷ್ಟು?
17. ಕೃಷಿಗೆ ಸಂಬಂಧ ಪಟ್ಟಂತೆ ಆಧುನಿಕ ಯಂತ್ರೋಪಕರಣಗಳ ಬಳಕೆ ಮಾಡುತ್ತಿರಾ?
18. ಕೃಷಿಗೆ ಸಂಬಂಧ ಪಟ್ಟಂತೆ ಎಂತಹ ಉಪಕರಣಗಳನ್ನು ಬಳಸುತ್ತೀರಿ?
19. ಕೃಷಗೆ ಸಂಬಂಧ ಪಟ್ಟಂತೆ ಬ್ಯಾಂಕುಗಳಿಂದ ಏನಾದರೂ ಸಾಲವನ್ನು ನೀವು ಪಡೆದಿದ್ದಾರಾ?

20. ಕೃಷಿಗೆ ಸಂಬಂಧ ಪಟ್ಟಂತೆ ಕೃಷಿ ಸಂಸ್ಥೆಯಿಂದ ರಿಯಾಯಿತಿ ನೀಡಿದ್ದರೇಯೆ?

21. ಕೃಷಿ ಸಂಸ್ಥೆಯಿಂದ ಎಂತಹ ವಸ್ತುಗಳು ರಿಯಾಯಿತಿಯಲ್ಲಿ ನಿಮಗೆ ದೊರೆತಿವೆ?

22. ನಿಮ್ಮ ಕೃಷಿ ಭೂಮಿಯ ಎಂತಹದು?

23. ನಿಮ್ಮ ಕೃಷಿ ಭೂಮಿ ಎಷ್ಟು ಎಕರೆ ಇದೆ?

24. ನಿಮ್ಮ ಹೊಲದಲ್ಲಿ ಬೋರ್‌ವೆಲ್ ವ್ಯವಸ್ಥೆ ಇದೆಯೇ?

25. ನಿಮ್ಮ ಕೃಷಿಯಲ್ಲಿ ಏನಾದರೂ ಮಿಶ್ರ ಬೇಸಾಯ ಇದೆಯೇ?

26. ಕೃಷಿಯ ಜೋತೆಗೆ ಪಶುಪಾಲನೆ ಮಾಡುತ್ತೀರಾ?

27. ನೀವು ಕೃಷಿಯ ಜೋತೆಗೆ ಸಾಕುವ ಕಸುಬು ಯಾವುವು?

28. ಪಶುಗಳ ಹಾಲಿನಿಂದ ಕೃಷಿಗೆ ಏನಾದರೂ ಸಹಾಯವಾಗುತ್ತದೆಯೇ?

29. ಪಶುಗಳ ಹಾಲನ್ನು ಮಾರುತ್ತೀರಾ?

30. ಪಶುಗಳಿಂದ ನಿಮ್ಮ ದಿನದ ಆದಾಯ ಎಷ್ಟು?

31. ಕೃಷಿಗೆ ಸಂಬಂಧ ಪಟ್ಟಂತೆ ಭೂಕಂದಾಯ ಏನಾದರೂ ಕಟ್ಟುತ್ತೀರಾ?

32. ವಾರ್ಷಿಕ ಭೂಕಂದಾಯ ಎಷ್ಟು ಕಟ್ಟುತ್ತೀರಿ?

33. ಕೃಷಿಯೇತರ ಕೆಲಸ ಮಾಡಿದ ನಂತರ ನಿಮಗೆ ದೊರೆಯುವ ಆದಾಯ ಎಷ್ಟು?

34. ನೀವು ಶಿಕ್ಷಣವನ್ನು ಪಡೆದಿದ್ದರಾ?

35. ನಿಮ್ಮ ಮಕ್ಕಳಿಗೆ ಶಿಕ್ಷಣ ನೀಡಿದ್ದಿರಾ?

36. ನಿಮ್ಮ ಮಕ್ಕಳು ಯಾವ ಶಾಲೆಗೆ ಹೋಗುತ್ತಾರೆ?

37. ನಿಮಗೆ ಸರಕಾರದಿಂದ ಏನಾದರೂ ನೀರಾವರಿಗೆ ಸಂಬಂಧಪಟ್ಟಂತೆ ಯೋಜನೆ ದೊರೆತಿದೆಯಾ?

38. ಕೃಷಿಯಲ್ಲಿ ಎಂತಹ ಯೋಜನೆಗಳು ನಿಮಗೆ ದೊರಕಿವೆ?

39. ಸರಕಾರ ನಿಮಗೆ ಪಡಿತರ ಚೀಟಿ ನೀಡಿದ್ದಾರೆಯೇ?

40. ನಿಮಗೆ ನೀಡಿರುವ ಪಡಿತರ ಚೀಟಿ ಯಾವುದು?

41. ಕಿರಾಣಿ ಅಂಗಡಿಗಳಲ್ಲಿ ನಿಮ್ಮ ದಿನದ ಆದಾಯ ಎಷ್ಟು?

42. ನೀವು ಸರಕಾರಿ ಕೆಲಸದಲ್ಲಿದ್ದೀರಾ?

43. ನೀವು ಕೆಲಸ ಮಾಡುವ ಕಚೇರಿ ಹೆಸರೇನು?

44. ನೀವು ಕೆಲಸ ಮಾಡುವ ಕಚೇರಿಯಲ್ಲಿ ನಿಮಗೆ ದೊರೆಯುವ ಮಾಸಿಕ ವೇತನ ಎಷ್ಟು?

45. ನೀವು ಯಾವುದಾದರೂ ಖಾಸಗಿ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದೀರಾ?

46. ನೀವು ಕೆಲಸ ಮಾಡುವ ಖಾಸಗಿ ಕ್ಷೇತ್ರದ ಆಫೀಸ್‌ನ ಹೆಸರೇನು?

47. ಮಹಿಳಾ ಸ್ವ-ಸಹಾಯ ಗುಂಪುಗಳ ಮುಖಾಂತರ ಏನಾದರೂ ನಿಮಗೆ ಅನುಕೂಲವಾಗಿವೆಯೇ?

48. ಸ್ವ-ಸಹಾಯ ಗುಂಪುಗಳಿಂದ ನಿಮಗೆ ಏನಾದರೂ ತರಬೇತಿ ಕಾರ್ಯಕ್ರಮಗಳು ನೀಡಲಾಗಿದೆಯೇ?

49. ಸ್ವ-ಸಹಾಯ ಗುಂಪುಗಳಲ್ಲಿ ಎಂತಹ ಕಾರ್ಯಕ್ರಮ ನೀಡಲಾಗಿದೆ?

50. ಸರಕಾರವು ಸ್ವ-ಸಹಾಯ ಗುಂಪುಗಳಿಗೆ ಏನಾದರೂ ಸೌಲಭ್ಯ ನೀಡಿದ್ದಾರೆಯೇ?

51. ರಾಜಕೀಯದಲ್ಲಿ ಭಾಗವಹಿಸಿದ್ದೀರಾ?

52. ರಾಜಕೀಯದಲ್ಲಿ ಎಷ್ಟು ವರ್ಷದ ಅನುಭವ ನಿಮಗೆ ಇದೆ?

53. ದೈವಿ ಸಂಬಂಧಿ ಹೆಸರಿನಲ್ಲಿ ಭಿಕ್ಷಾಟನೆ ಮಾಡುವಾಗ ನಿಮಗೆ ಏನನ್ನು ನೀಡುತ್ತಾರೆ?



ಕಳೆ ತೆಗೆಯುತ್ತಿರುವ ಬೇಡ ಮಹಿಳೆ – ತಿಮ್ಮನಾಥಕೇರಿ



ನೀರು ಕಟ್ಟುತ್ತಿರುವ ಬೇಡ ಮಹಿಳೆ – ಕುಪ್ಪಯ್ಯ ಕ್ಯಾಂಪ್



ಪಶುಗಳಿಗೆ ಮೇವುಹಾಕುತ್ತಿರುವ ಬೇಡ ಮಹಿಳೆ – ಕಮಲಾಪುರ



ಪಶುಪಾಲನೆಯಲ್ಲಿ ತೊಡಗಿದ ಮಹಿಳೆ – ಹಿರೇಕೇರಿ



ಕಿರಾಣಿ ವ್ಯಾಪಾರದಲ್ಲಿ ತೊಡಗಿದ ಬೇಡ ಮಹಿಳೆ – ಬಂಡೆಕೇರಿ



ತರಕಾರಿ ವ್ಯಾಪಾರ ನಡೆಸುತ್ತಿರುವ ಬೇಡ ಮಹಿಳೆ – ಹಳ್ಳಿಕೇರಿ



ಕಸ ಹಾರಿಸುತ್ತಿರುವ ಬೇಡ ಮಹಿಳೆರು – ತಿಮ್ಮನಾಥಕೇರಿ



ಬೀಜ ಬಿತ್ತನೆಯಲ್ಲಿ ತೊಡಗಿದ ಬೇಡ ಮಹಿಳೆಯರು –ಕಮಲಾಪುರ



ಬೇಡರ ಕುರಿಹಟ್ಟಿ – ಕಮಲಾಪುರ



ಗಾರೆ ಕೆಲಸದಲ್ಲಿ ತೊಡಗಿದ ಬೇಡ ಮಹಿಳೆ – ಕಮಲಾಪುರ



ಎತ್ತಿನ ಬಂಡಿಯಲ್ಲಿ ಹೋಗುತ್ತಿರುವ ಬೇಡ ಮಹಿಳೆ–ಚೌಡಿಕೇರಿ



ದೈವಿಸಂಬಂಧಿ ಆಚರಣೆಗಳಲ್ಲಿನ ಮಹಿಳೆಯರು – ಕಮಲಾಪುರ



ಕಮಲಾಪುರದ ಬೇಡ ಮಹಿಳೆಯರನ್ನು ಸಂದರ್ಶಿಸುತ್ತಿರುವ – ಸಂಶೋಧಕರು

ಕಮಲಾಪುರದ ಬೇಡ ಮಹಿಳೆಯನ್ನು ಸಂದರ್ಶಿಸುತ್ತಿರುವ – ಸಂಶೋಧಕರು

